# ವೃತ್ತಪತ್ರಿಕೆಗಳು

ಅವುಗಳ

## ಚರಿತ್ರೆ ಕರ್ತವ್ಯ ಅಪೇಕ್ಷೆ ಸ್ವಾತಂತ್ರ್ಯಗಳು

**ಡಿ. ವಿ. ಗುಂಡಪ್ಪನವರಿಂದ**

ಬಾಗಲಕೋಟೆಯ ಪತ್ರಕರ್ತ ಸಮ್ಮೇಲನದ ಅಧ್ಯಕ್ಷೋಪನ್ಯಾಸದೊಂದಿಗೆ)

ಬೆಂಗಳೂರು ಸಿಟಿ

**ಕರ್ಣಾಟಕ ಪ್ರಕಟನಾಲಯ**

ಬಸವನಗುಡಿ

## ಈ ಲೇಖಕರ ಇತರ ಗ್ರಂಥಗಳು

ಕವಿತೆ—

ನಿವೇದನ



ವಸಂತ ಕುಸುಮಾಂಜಲಿ

ನಾಟಕ—

ಶ್ರೀ ವಿದ್ಯಾರಣ್ಯ ವಿಜಯ

ತಿಲೋತ್ತಮೆ

ಕನಕಾಲುಕಾ

ಜೀವನ ಚರಿತ್ರೆ—

ಗೋಖಲೆ

ದಿವಾನ್ ರಂಗಾಚಾರ್ಲು

ವಿದ್ಯಾರಣ್ಯರು ಮತ್ತು ಅವರ ಕಾಲ

—ಮೊದಲಾದುವು

# ವಿಷಯ ಸೂಚಿಕೆ

---

"The power of the journalist in the world is increasing. Your profession wields an influence which involves a great responsibility. The work of the Institute (of Journalists), therefore, in maintaining the personal dignity and the sense of public duty in national and international affairs, constitutes an important service to the people whom you serve."

—*President* COSGRAVE *of the Irish Free State,*
*18th July 1928.*

---

"The newspaper is now a necessity of life........ ........It is certain that the newspaper has come to be the support not only of our breakfasts,

but a large part of our existence. It is an essential instrument of our whole public life. Democratic government—the government of a free modern State—has been described as government by discussion; and how are you to discuss affairs of State unless you know what there is to discuss and have full and free means of discussion? There you get to the very foundations of popular government........No doubt, like most other good things, the newspaper is liable to abuse; but the remedy for this lies not with a jealous State, but with a discerning public."

—C. P. Scott, *Editor, the "Manchester Guardian*
*March 192*

---

"Contrast the position of the Press to-day with what it was in those days (a hundred years ago). At that time there was a bye-law under which no man who contributed to the Press was eligible to be called to the bar; and the Lord Chancellor of the day caused great consternation and indignation amongst his friends by asking the editor of the *Times* to dine with him. To-day, which of us would not feel proud if we were asked to dine with a newspaper proprietor?"

—The Rt. Hon. Stanley Baldwin,
*Prime Minister of Great Britain (1924).*

# ವೃತ್ತಪತ್ರಿಕೆಗಳು

## ಪೀಠಿಕೆ

---

ಸುಮಾರು ೧೨೦ ವರ್ಷಗಳ ಹಿಂದೆ, ಲಾರ್ಡ್ ಮಿಂಟೋ ಪ್ರಭುವು ಇಂಡಿಯಾ ದೇಶದ ಗವರ್ನರ್-ಜನರಲ್ ಆಗಿದ್ದಾಗ (೧೮೦೭–೧೩), ಈ ದೇಶದಲ್ಲಿ ಒಂದು ವಿಚಿತ್ರ ಸಂಗತಿ ನಡೆಯಿತು. ಆಗಿನ ಹೈದರಾಬಾದು ಸಂಸ್ಥಾನದ ನಿಜಾಮರು ಯುರೋಪಿಯನ್ ಜನರ ವಿಜ್ಞಾನ ಚಮತ್ಕಾರದ ಮಾದರಿಗಳನ್ನು ನೋಡಬೇಕೆಂದು ಕುತೂಹಲಪಟ್ಟು, ತಮ್ಮಲ್ಲಿ ಆಗ ಬ್ರಿಟಿಷ್ ರೆಸಿಡೆಂಟ್ ಆಗಿದ್ದ ಕ್ಯಾಪ್ಟನ್ ಸೈಡೆನ್ ಹ್ಯಾಂ ಎಂಬಾತನಿಗೆ ಅದನ್ನು ತಿಳಿಸಿದರು. ಆ ಕುತೂಹಲವನ್ನು ನೆರವೇರಿಸಬೇಕೆಂದು ಈತನು, ಒಂದು ಗಾಳಿಯನ್ನು ಹೊರಕ್ಕೆ ಹೊರಡಿಸುವ ಕೊಳವಿ (ಯೇರ್-ಪಂಪ್), ಒಂದು ಮುದ್ರಣ ಯಂತ್ರ (ಪ್ರಿಂಟಿಂಗ್ ಪ್ರೆಸ್), ಒಂದು ಯುದ್ಧದ ಜಹಜಿನ ನಮೂನೆ—ಈ ಮೂರು ಯಂತ್ರಗಳನ್ನು ಹೈದರಾಬಾದಿಗೆ ತರಿಸಿ, ತಾನು ಹೀಗೆ ಮಾಡಿದ ಸಂಗತಿಯನ್ನು ತನ್ನ ಸರಕಾರದ ಮೇಲಿನ ಅಧಿಕಾರಿಗಳಿಗೆ ವರದಿ ಮಾಡಿದನು. ಆ ಮೂರು ಸಂಧಾನಗಳ ಪೈಕಿ ಮುದ್ರಣ ಯಂತ್ರವನ್ನು ತರಿಸಿ, ಅಂಥಾ ಅಪಾಯಕರವಾದ ಆಯುಧವನ್ನು ಆ ದೇಶೀಯ ರಾಜನ ಕೈಗೆ ಒಪ್ಪಿಸಿ ಕೊಟ್ಟುದಕ್ಕಾಗಿ ಬ್ರಿಟಿಷ್ ಸರಕಾರದವರು ಸೈಡನ್ ಹ್ಯಾಮಿನ ಮೇಲೆ ಆಗ್ರಹ ತೋರಿದರು. ಅದರ ಮೇಲೆ ಆತನು ತನ್ನ ಸರಕಾರಕ್ಕೆ ಬೇರೊಂದು ಸಮಾಧಾನ ಪತ್ರವನ್ನು ಬರೆದು, ಅವರ ಭಯಕ್ಕೆ ಕಾರಣವಿಲ್ಲವೆಂದೂ, ಮುದ್ರಣ ಯಂತ್ರ ವಿಚಾರದಲ್ಲಿ ನಿಜಾಮರು ಆಸಕ್ತಿಯೇನನ್ನೂ ತೋರಿಸಲಿಲ್ಲವೆಂದೂ, ಆ ಯಂತ್ರದ ಉಪಯೋಗವನ್ನು ತೋರಿಸಿಕೊಡಲು ಮದ್ರಾಸಿನಿಂದ ಬಂದಿದ್ದ ಅಚ್ಚಕ್ಷರ ಜೋಡಿಸುವ (ಕಂಪಾಸಿಟರ್) ಕೆಲಸಗಾರರಿಗೆ ನಿಜಾಮರು ಇನಾಮು ಸಹ ಕೊಡಲಿಲ್ಲವೆಂದೂ ಅರಿಕೆ ಮಾಡಿಕೊಂಡದ್ದಲ್ಲದೆ, ಆ ಮುದ್ರಣ ಯಂತ್ರವು ಹೈದರಾಬಾದಿ

ಸಲ್ಲಿರುವ ವಿಷಯದಲ್ಲಿ ಬ್ರಿಟಿಷ್ ಸರಕಾರಕ್ಕೆ ಇನ್ನೂ ಶಂಕೆಯೇನಾದರೂ ಇದ್ದ ಪಕ್ಷದಲ್ಲಿ, ತಾನೇ ಉಪಾಯಾಂತರದಿಂದ ನಿಜಾಮರ ತೋಷಾಖಾನೆಗೆ ಹೋಗಿ, ಅಲ್ಲಿ ಯಾರಿಗೂ ತಿಳಿಯದಂತೆ ಮುದ್ರಣ ಯಂತ್ರವನ್ನು ಭಗ್ನಪಡಿಸಿ ಅದು ಕೆಲಸಕ್ಕೆ ಬಾರದಂತೆ ಮಾಡುವುದಾಗಿ ಭರವಸೆ ಕೊಟ್ಟನು.*

ಹೀಗಿತ್ತು ಆ ಕಾಲದಲ್ಲಿ ಮುದ್ರಣ ಯಂತ್ರದ ಭಯ. ಜನರಿಗೆ ತಿಳಿಯದ ವಿಷಯಗಳನ್ನು ತಿಳಿಯಪಡಿಸಿ, ಇಲ್ಲದಿರುವ ಆಶೆ ಆಶಯಗಳನ್ನು ಉಂಟುಮಾಡಿಸಿ, ಅವರಲ್ಲಿ ಹೊಸ ಆವೇಶವನ್ನೂ ಹೊಸ ಧೈರ್ಯವನ್ನೂ ಹುಟ್ಟಿಸಿ, ಅವರ ಬುದ್ಧಿಯನ್ನೂ ನಡೆವಳಿಕೆಯನ್ನೂ ಬದಲಾಯಿಸಬಲ್ಲುದಲ್ಲವೆ ಈ ಮುದ್ರಣ ಯಂತ್ರ? ಅದರ ಸಂಕ್ಷೋಭಕಾರಕವಾದ ಪ್ರಭಾವವನ್ನು ಬ್ರಿಟಿಷರು ಮೊದಮೊದಲೇ ಕಂಡುಕೊಂಡಿದ್ದರು. ಆದುದರಿಂದಲೇ ಈ ದೇಶದಲ್ಲಿ ವೃತ್ತಪತ್ರಿಕೆಗಳ†—ತತ್ರಾಪಿ ದೇಶಭಾಷೀಯ ಪತ್ರಿಕೆಗಳ—ಬೆಳವಳಿಗೆಯ ವಿಷಯವಾಗಿ ಅವರಿಗೆ ಸಂತೋಷವಿಲ್ಲದೆ ಇದ್ದುದು. ಮಾನವ ವರ್ಗದ ನಯ ನಾಗರಿಕತೆಗಳ ಚರಿತ್ರೆಯಲ್ಲಿ ಮುದ್ರಣ ಯಂತ್ರದಿಂದ ಆಗಿರುವುದಕ್ಕಿಂತ ಹೆಚ್ಚಾದ ಮಾರ್ಪಾಟುಗಳು ಯಾವ ಸಂಧಾನದಿಂದಲೂ ಆಗಿಲ್ಲವೆಂದು ಹೇಳಬಹುದು. ಈ ಮಹಾಶಕ್ತಿಯ ಒಂದು ಮುಖ್ಯಾವತಾರದ ಪ್ರಶಂಸೆಯೇ ಈ ಸಣ್ಣ ಪುಸ್ತಕದ ವಿಷಯ.

ವೃತ್ತಪತ್ರಿಕೆಯೆಂಬುದೇ ಆ ಮುಖ್ಯಾವತಾರ. ವೃತ್ತಪತ್ರಿಕೆಗಳ ಪ್ರಚಾರವೂ ಪ್ರಾಬಲ್ಯವೂ ನಮ್ಮ ದೇಶದಲ್ಲಿ ಈಗ ಹೆಚ್ಚಾಗುತ್ತಿವೆ. ವಿದ್ಯಾಭ್ಯಾಸವೂ ರಾಜಕೀಯ ಬುದ್ಧಿಯೂ ಜನರಲ್ಲಿ ಹರಡುತ್ತ ಹೋದ ಹಾಗೆಲ್ಲ ಪತ್ರಿಕೆಗಳ ಬಲವೂ ವ್ಯಾಪನೆಯೂ ಇನ್ನೂ ಹೆಚ್ಚಲೇ ಬೇಕು. ಜನರ ಜ್ಞಾನ, ಅಭಿಪ್ರಾಯ, ನಡತೆ, ಮಾತು, ವ್ಯಾಪಾರ, ವ್ಯವಹಾರ—

---

* '*Life of Lord Metcalfe*' by J. W. Kaye (1858) Vol. II, P. 136

† ವೃತ್ತಪತ್ರಿಕೆ, ವಾರ್ತಾಪತ್ರಿಕೆ, ವೃತ್ತಾಂತಪತ್ರಿಕೆ, ವರ್ತಮಾನಪತ್ರಿಕೆ, ''ನ್ಯೂಸ್‌ಪೇಪರ್''—ಇವೆಲ್ಲವೂ ಏಕಾರ್ಥ ಪದಗಳು. ಇವುಗಳ ಸ್ಥಾನದಲ್ಲಿ ''ಪತ್ರಿಕೆ'' ಎಂಬ ಸಂಕ್ಷೇಪ ಪದವನ್ನು ಕೆಲವು ಕಡೆ ಸ್ಥಲಸೌಲಭ್ಯಕ್ಕಾಗಿ ಉಪಯೋಗಿಸಿದೆ.

ಇವೆಲ್ಲವನ್ನೂ ಪತ್ರಿಕೆಗಳು ಪ್ರತಿನಿತ್ಯವೂ ಒಂದು ಒಗೆಯುಲ್ಲಲ್ಲದಿದ್ದರೆ ಇನ್ನೊಂದು ಒಗೆಯುಲ್ಲಿ ತಿದ್ದುತ್ತಲೇ ಇರುತ್ತವೆ. ಹೀಗೆ ದೇಶ ಜೀವನದ ಮುಖ್ಯ ಉಪಕರಣಗಳ ಪೈಕಿ ಅತಿ ಮುಖ್ಯವಾದ ಒಂದಾಗಿ, ನಮ್ಮೆಲ್ಲರ ದಿನಚರ್ಯೆಗೆ ಅತ್ಯಂತ ಗಾಢವಾಗಿ ಸಂಬಂಧಪಟ್ಟಿರುವ ವೃತ್ತಪತ್ರಿಕೆ ಎಂಬ ಈ ಹೊಸ ಚೈತನ್ಯದ ಪೂರ್ವೋತ್ತರ ಚರಿತ್ರೆಯನ್ನೂ, ಅದರ ಕರ್ತವ್ಯಾಕರ್ತವ್ಯಗಳನ್ನೂ, ಅದರ ಕಷ್ಟ ಕೊರತೆಗಳನ್ನೂ ನಾವೆಲ್ಲರೂ ಚೆನ್ನಾಗಿ ತಿಳಿದುಕೊಳ್ಳುವುದು ನಮ್ಮ ಯೋಗಕ್ಷೇಮಗಳಿಗೆ ಅವಶ್ಯವಾದ ಸಂಗತಿ.

ಲೋಕವಾರ್ತೆಯನ್ನು ರಾಜನೂ ರಾಜವಾರ್ತೆಯನ್ನು ಪ್ರಜೆಗಳೂ ತಿಳಿದುಕೊಳ್ಳುವುದು ಆವಶ್ಯಕವೆಂಬುದನ್ನು ನಮ್ಮ ಪೂರ್ವಿಕರು ಕಂಡುಕೊಂಡಿದ್ದರು. ಅದಕ್ಕಾಗಿ ಪುರಾತನ ಹಿಂದೂ ರಾಜ್ಯಗಳಲ್ಲಿ ಬೇಹುಗಾರರು ರಾಜರಿಗೋಸ್ಕರವಾಗಿಯೂ, ಡಂಗುರದವರು ಜನರಿಗೋಸ್ಕರವಾಗಿಯೂ ನೇಮಕವಾಗಿರುತ್ತಿದ್ದರು. ಪ್ರಾಚೀನ ರೋಂ ರಾಷ್ಟ್ರದಲ್ಲಿ ಆಯಾ ದಿವಸದ ವಿಶೇಷ ಸಂಗತಿಗಳನ್ನು "ದಿನವಾರ್ತೆ" ಎಂಬ ಒಂದು ದಫ್ತರದಲ್ಲಿ ಬರೆಯಿಸಿ ಚಾವಡಿಯಲ್ಲಿಡಿಸುವ ಪದ್ಧತಿಯಿತ್ತು. ಆದರೆ ದೇಶ ವಿದೇಶಗಳ ವೃತ್ತಾಂತಗಳನ್ನು ಅನೇಕ ಪ್ರತಿಗಳಲ್ಲಿ ಅಚ್ಚಿಟ್ಟು ಜನರಲ್ಲಿ ಹಂಚುವ ವ್ಯಾಪಾರವು ಈಚಿನದು. ಅದು ಮುದ್ರಣ ಕಲೆಯ ಬೆಳವಣಿಗೆಯಿಂದ ಉತ್ಪನ್ನವಾದುದು.

## ಯಂತ್ರೋಪಕರಣಗಳು

ಮುದ್ರಣ ವಿಧಾನವನ್ನು ಮೊದಲು ಕಂಡುಹಿಡಿದವನು ಚೀನಾ ದೇಶದ ಪಿ-ಷಿಂಗ್ ಎಂಬ ಅಕ್ಕಸಾಲೆ. ಅವನು ಅಕ್ಷರಗಳನ್ನು ಸಣ್ಣ ಸಣ್ಣ ಮರದ ದಿಮ್ಮಿಗಳ ಮೇಲೆ ಕೆತ್ತಿ ಅದರಿಂದ ಕಾಗದದ ಮೇಲೆ ಅಚ್ಚೊತ್ತುತ್ತಿದ್ದನು. ಈ ವಿಧಾನದಿಂದ ಅಚ್ಚಾದ ವೃತ್ತಪತ್ರಿಕೆಯೊಂದು ಆ ದೇಶದ ರಾಜಧಾನಿಯಾದ ಪಿಕಿಂಗ್ ಪಟ್ಟಣದಲ್ಲಿ ಕ್ರಿಸ್ತ ಶಕ ೬೧೮ ನೆಯ ಇಸ್ವಿಯ ಹಿಂದೆಯೇ ಪ್ರಕಟವಾಗುತ್ತಿತ್ತೆಂದು ಹೇಳುತ್ತಾರೆ.

ಹೀಗೆ ಮೊದಲಾದ ಅಕ್ಷರ ಮುದ್ರಣ ಕಲೆಯು ಕ್ರಿ. ಶ. ಸುಮಾರು ೧೪೬೦ರ ವೇಳೆಗೆ ಯುರೋಪ್ ಖಂಡದ ಜರ್ಮನಿ,

ಹಾಲೆಂಡ್ ಮೊದಲಾದ ದೇಶಗಳಿಗೆ ಬಂದು ಪ್ರವರ್ಧಮಾನವಾಯಿತು. ಅಲ್ಲಿಂದ ಕೆಲವು ವರ್ಷಗಳೊಳಗಾಗಿ (೧೪೭೬) ಆ ಕಲೆಯು ಇಂಗ್ಲೆಂಡ್ ದೇಶಕ್ಕೆ ಹೋಗಿ ನೆಲಸಿತು. ಅಲ್ಲಿಂದೀಚೆಗೆ ಸೀಸ ಮೊದಲಾದ ಲೋಹಗಳಿಂದ ಅಕ್ಷರಗಳನ್ನೆರಕ ಹೊಯ್ಯುವ ಸಂಧಾನಗಳೂ, ಅಕ್ಷರಗಳ ಗಾತ್ರ ರೂಪಗಳೂ ಕ್ರಮೇಣ ಉತ್ತಮಪಡುತ್ತ ಬಂದಿವೆ. ಅಚ್ಚು ಮಾಡುವ ಯಂತ್ರೋಪಕರಣಗಳೂ ಹಾಗೆಯೇ ಕ್ರಿ. ಶ. ೧೬೮೦ ರಿಂದೀಚೆಗೆ ಹೆಚ್ಚು ಹೆಚ್ಚು ಅನುಕೂಲವಾಗಿ ಮಾರ್ಪಡುತ್ತ ಬಂದಿವೆ. ಈ ಮುದ್ರಣ ಕಲೆಯ ಚರಿತ್ರೆಯು ಸ್ವತಃ ಆಶ್ಚರ್ಯವನ್ನುಂಟುಮಾಡ ಬಲ್ಲುದಾಗಿ, ಬೇರೊಂದು ಸ್ವತಂತ್ರ ಗ್ರಂಥಕ್ಕೆ ತಕ್ಕಷ್ಟು ದೊಡ್ಡ ವಿಷಯವಾಗಿದೆ.

ಕಾಗದದ ಕಥೆಯೂ ಅದೇ ರೀತಿ ಇದೆ. ಕಾಗದವನ್ನು ಮೊದಲು ತಯಾರುಮಾಡಿದವರೂ ಚೀನರೇ. ಅವರಿಂದ ಅರಬ್ಬೀ ದೇಶದವರೂ, ಅವರಿಂದ ಸ್ಪೈಯಿನ್ ದೇಶದವರೂ ಆ ವಿದ್ಯೆಯನ್ನು ಕಲಿತುಕೊಂಡರು. ಕ್ರಿ. ಶ. ೧೩೦೦ರ ವೇಳೆಗೆ ಸ್ಪೈಯಿನ್, ಇಟಲಿ, ಹಾಲೆಂಡ್ ಮೊದಲಾದ ದೇಶಗಳಲ್ಲಿ ಅನೇಕ ಕಾಗದದ ಕಾರ್ಖಾನೆಗಳು ಹುಟ್ಟಿಕೊಂಡು ಕಾಗದದ ಉಪಯೋಗವು ಯೂರೋಪಿನಲ್ಲೆಲ್ಲಾ ಹರಡಿತ್ತು; ಕಾಗದದ ಕಾರ್ಖಾನೆಯೂ, ಅಚ್ಚಿನ ಕಾರ್ಖಾನೆಯೂ ವೃತ್ತಪತ್ರಿಕೆಯ ಕಾರ್ಖಾನೆಗೆ ತಾಯಿ ತಂದೆಗಳು.

ವೃತ್ತಪತ್ರಿಕೆಯ ಬೆಳವಣಿಗೆಗೆ ಸಹಾಯಗಳಾದ ಇತರ ಸಂಧಾನಗಳು ಯಾವುವೆಂದರೆ:—

(೧) ಪೋಸ್ಟು (ಅಥವಾ ಅಂಚೆ):—ಇದು ಗ್ರಾಮಾಂತರ ದೇಶಾಂತರಗಳಿಂದ ವಾರ್ತೆಗಳನ್ನು ತರುವುದಕ್ಕೂ, ವೃತ್ತಪತ್ರಿಕೆಗಳನ್ನು ಅಲ್ಲೆಲ್ಲಾ ಹರಡುವುದಕ್ಕೂ ಸಾಧಕವಾದುದು. ಈ ಸಾಧನವು ಅಭಿವೃದ್ಧಿ ಪಡೆಯಲು ಹಬೆಯ ಜಹಜು (ಸ್ಟೀಮರ್), ಹಬೆಯ ಗಾಡಿ (ರೈಯಿಲ್)—ಮೊದಲಾದ ವೈಜ್ಞಾನಿಕ ಯಂತ್ರಗಳು ಎಷ್ಟು ದೊಡ್ಡ ಕಾರಣವೆಂಬುದನ್ನು ನಾವು ಜ್ಞಾಪಕಕ್ಕೆ ತಂದುಕೊಳ್ಳಬೇಕು.

(೨) ಟೆಲೆಗ್ರಾಫ್ (ಅಥವಾ ಶಬ್ದವಾಹಕ ತಂತಿ):—ಇದು ದೂರ ಪ್ರದೇಶಗಳ ಸಮಾಚಾರಗಳನ್ನು ಶೀಘ್ರವಾಗಿ ತಂದೊದಗಿಸತಕ್ಕುದು. ಈಚೆಗೆ ತಯಾರಾಗಿ ಈಗೀಗ ಪ್ರಚಾರಕ್ಕೆ ಬರುತ್ತಿರುವ "ರೇಡಿಯೊ" ಎಂಬ (ತಂತಿಯಿಲ್ಲದ) ಶಬ್ದವಾಹಕ ಸಂಧಾನವು ವಾರ್ತಾ ಸಂಚಾರವನ್ನು ಮತ್ತಷ್ಟು ತ್ವರಿತಗೊಳಿಸುವುದು.

(೩) ಫೋಟೋಗ್ರಾಫ್-ಪ್ರೋಸೆಸ್ (ಅಥವಾ ಭಾವಚಿತ್ರಗಳನ್ನು ತೆಗೆದು ಪಡಿಯಚ್ಚು ಮಾಡುವ ಸಂಧಾನ):—ಇದು ಪತ್ರಿಕೆಗಳಲ್ಲಿ ಚಿತ್ರಪಟಗಳನ್ನು ಹಾಕಲು ಬೇಕಾದ ಸಾಧನ.

ಈ ಮತ್ತು ಇತರ ಯಂತ್ರಸಂಧಾನಗಳ ಚರಿತ್ರೆಯನ್ನು ತಿಳಿಸುವುದಕ್ಕೆ ಬೇರೆ ಬೇರೆ ಗ್ರಂಥಗಳು ಅನೇಕವಿರಬೇಕು. ಇಲ್ಲಿ ಮುಖ್ಯವಾಗಿ ನಮ್ಮ ನೆನಪಿನಲ್ಲಿರಬೇಕಾದ ಸಂಗತಿಯೇನೆಂದರೆ—ವಾರ್ತಾಪತ್ರಿಕೆಯು ಅನೇಕ ಬಗೆಯ ವಿಜ್ಞಾನ (ಸೈನ್ಸ್) ಸಾಧನಗಳ ಜೋಡಣೆಯಿಂದ ಹುಟ್ಟಿದ ವಸ್ತು ಎಂಬುದು. ಕಾಗದ, ಅಕ್ಷರ, ಮಶಿ, ಮುದ್ರಣಯಂತ್ರ—ಇವೇ ಮೊದಲಾದ ಉಪಕರಣಗಳನ್ನು ನಿರ್ಮಾಣ ಮಾಡುವುದರಲ್ಲಿಯೂ, ಮೋಟಾರ್, ಏರೋಪ್ಲೇನ್ ಮೊದಲಾದ ದೂರಪರಿಹಾರ ಯಂತ್ರಗಳ ರಚನೆಯಲ್ಲಿಯೂ ಹೊಸ ಹೊಸ ಚಮತ್ಕಾರಗಳೂ ಹೊಸ ಹೊಸ ಉಪಾಯಗಳೂ ಹುಟ್ಟಿಕೊಂಡಹಾಗೆಲ್ಲ ವೃತ್ತಪತ್ರಿಕೆಗಳ ರೂಪ ಸೌಂದರ್ಯವೂ ವಿಷಯ ಸ್ವಾರಸ್ಯವೂ, ಹಾಗೆಯೇ ಅವುಗಳ ಸಂಚಾರದಲ್ಲಿ ವೇಗವೂ ಬೆಲೆಯಲ್ಲಿ ಸೌಲಭ್ಯವೂ ಹೆಚ್ಚುವುವು.

## ಪೂರ್ವಕಥೆ

ಮುದ್ರಣಾನುಕೂಲಗಳು ತಕ್ಕಮಟ್ಟಿಗೆ ಉಂಟಾದ ಬಳಿಕ ವೃತ್ತಪತ್ರಿಕೆ ಹುಟ್ಟಿದ್ದು ಮೊದಲು ಜರ್ಮನೀ ದೇಶದಲ್ಲಿ (೧೬೧೫). ಇಂಗ್ಲೆಂಡಿನಲ್ಲಿ ಅದು ಸುಮಾರು ೧೬೨೨ರಲ್ಲಿ ಮೊದಲಾಯಿತು. ಆದರೆ ಮೊದಮೊದಲಿನ ಪತ್ರಿಕೆಗಳು ಲಘು ಪುಸ್ತಕದ (Pamphlet) ಆಕಾರದಲ್ಲಿದ್ದುವು; ಅವು ಸಾಮಾನ್ಯವಾಗಿ ವಾರಕ್ಕೊಂದು ಸಲ ಪ್ರಕಟವಾಗುತ್ತಿದ್ದುವು.

ನಾಣ್ಯಗಳನ್ನು ಅಚ್ಚುಮಾಡುವ ಟಂಕಸಾಲೆ ಹೇಗೋ ಪುಸ್ತಕಗಳನ್ನು ಅಚ್ಚುಮಾಡುವ ಮುದ್ರಣಶಾಲೆಯೂ ಹಾಗೆಯೇ ಮೊದಲು ಇಂಗ್ಲೆಂಡಿನಲ್ಲಿ ರಾಜರ ಸ್ವತ್ತಾಗಿತ್ತು. ರಾಜರ ಅಪ್ಪಣೆಯಿಲ್ಲದೆ ಮುದ್ರಣಯಂತ್ರವನ್ನಿಟ್ಟವನೂ, ಪುಸ್ತಕವನ್ನು ಮುದ್ರಣಗೊಳಿಸಿದವನೂ ಶಿಕ್ಷೆಗೆ ಗುರಿಯಾಗುತ್ತಿದ್ದರು. ೧೬೪೧ರಲ್ಲಿ ಮುದ್ರಣಶಾಲೆಗಳ ಮೇಲೆ ವಿಚಾರಣೆ ನಡೆಸುವ ಈ ಅಧಿಕಾರವು ರಾಜನ ಕೈತಪ್ಪಿ ಪಾರ್ಲಿಮೆಂಟ್ (ಪ್ರಜಾಪ್ರತಿನಿಧಿ) ಸಭೆಗೆ ದೊರೆಯಿತು. ಆದರೆ ಪಾರ್ಲಿಮೆಂಟ್ ಸಭೆಯೇ ೧೬೪೩ರಲ್ಲಿ ಮುದ್ರಣಕರ್ತರ ಶಿಕ್ಷೆಗೆ ಬೇರೆ ಶಾಸನಗಳನ್ನು ರಚಿಸಿತು. ಹೀಗಾದರೂ ೧೬೪೧ರಿಂದ ೧೬೫೫ರ ವರೆಗೂ—ಎಂದರೆ ೧೫ ವರ್ಷಗಳೊಳಗಾಗಿ—ಇಂಗ್ಲೆಂಡಿನಲ್ಲಿ ವಾರ್ತಾ ಪುಸ್ತಕಗಳು (News-books) ಸುಮಾರು ೩೦೦ ಹುಟ್ಟಿದವು. ಅವುಗಳಲ್ಲಿ ಒಂದು ವರ್ಷಕ್ಕೆ ಮೇಲ್ಪಟ್ಟು ಜೀವಿಸಿದವು ೩೩ ಮಾತ್ರ. ಆ ಪೈಕಿ ಒಂದು ಸಚಿತ್ರ ಪತ್ರಿಕೆ. ಈ ಕಾಲದಲ್ಲಿ "ಪಾರ್ಲಿಮೆಂಟ್ ಸ್ಕೌಟ್" ಎಂಬ ಪತ್ರಿಕೆಯನ್ನು ಹೊರಡಿಸಿದ್ದ ಜಾನ್ ಡಿಲ್ಲಿಂಗ್‌ಹ್ಯಾಮ್ ಎಂಬಾತನು ವಾರ್ತೆಗಳನ್ನು ಪ್ರಕಟಿಸುತ್ತಿದ್ದುದಲ್ಲದೆ ಅವುಗಳನ್ನು ಕುರಿತು ಟೀಕೆಗಳನ್ನೂ ಮಾಡಲುಪಕ್ರಮಿಸಿದ್ದನು (ಸುಮಾರು ೧೬೪೫). ಈತನೇ ವೃತ್ತಪತ್ರಿಕೆಗಳಲ್ಲಿಯ "ಲೀಡಿಂಗ್ ಆರ್ಟಿಕಲ್" (ಸಂಪಾದಕೀಯ ಟಿಪ್ಪಣಿ) ಎಂಬ ಅಗ್ರಲೇಖನಕ್ಕೆ ಮೂಲಪುರುಷ. ಈ ಹೊಸದಾದ ಅಗ್ರಲೇಖನಗಳಲ್ಲಿ ಆತನು ಮಾಡಬೇಕಾಗಿ ಬಂದ ಆಕ್ಷೇಪಣೆ ಶ್ಲಾಘನೆಗಳ ಕಾರಣದಿಂದ ಡಿಲ್ಲಿಂಗ್‌ಹ್ಯಾಮನಿಗೆ ಆ ಕಾಲದ ರಾಜಕೀಯ ಪ್ರಮುಖ ಜನರಲ್ಲಿ ಶತ್ರುಗಳುಂಟಾದರು. ಅವರ ಆಗ್ರಹದ ದೆಸೆಯಿಂದ ಆತನಿಗೆ ಸ್ವಲ್ಪ ಕಾಲ ಕಾರಾಗೃಹಪ್ರಾಪ್ತಿಯೂ ಆಯಿತು. ಆದರೂ ಆತನು ತನ್ನ ವ್ಯಾಪಾರವನ್ನು ಬಿಡಲಿಲ್ಲ; ಸೆರೆಮನೆಯಿಂದ ಹಿಂದಿರುಗಿ ಬಂದೊಡನೆಯೆ "ಮಾಡರೇಟ್ ಇಂಟೆಲಿಜೆನ್ಸರ್" (ಮಿತ ಬೋಧಕ) ಎಂಬ ಇನ್ನೊಂದು ಪತ್ರಿಕೆಯನ್ನಾರಂಭಿಸಿದನು.

ಇಂಗ್ಲೆಂಡಿನ ಮೊತ್ತಮೊದಲನೆಯ ದಿನಪತ್ರಿಕೆ ಹುಟ್ಟಿದ್ದು ೧೬೬೦ ರಲ್ಲಿ. ಅದನ್ನು ಆಲಿವರ್ ವಿಲಿಯಮ್ಸ್ ಎಂಬಾತನು ಹೊರಡಿಸಿದ್ದನು.

ಅದು ೨೪ ದಿನ ಮಾತ್ರ ನಡೆಯಿತು. ಅದರ ಹೆಸರು "ಪರ್‌ಫೆಕ್ಟ್ ಡಯುರ್ನಲ್" (ಸಂಪೂರ್ಣ ದಿನಚರಿ) ಎಂದು. ಅದರಲ್ಲಿ ಪಾರ್ಲಿಮೆಂಟ್ ಸಭೆಯ ಸುದ್ದಿಗಳು ಪ್ರಕಟವಾಗುತ್ತಿದ್ದವು.

೧೬೬೫ರಲ್ಲಿ "ಲಂಡನ್ ಗೆಜೆಟ್" ಎಂಬ ಸರಕಾರೀ ವೃತ್ತಪತ್ರಿಕೆಯು ಪ್ರಾರಂಭವಾಯಿತು. ಇದು ರಾಜಾಶ್ರಯದಲ್ಲಿ ಹುಟ್ಟಿ, ರಾಜಾಜ್ಞೆ, ಸರಕಾರದ ನಿಬಂಧನೆ ನಿಯಾಮಕಗಳು—ಮೊದಲಾದ ಪ್ರಭು ಕಾರ್ಯದ ಸಂಗತಿಗಳನ್ನು ಜನರಿಗೆ ತಿಳಿಸತಕ್ಕದ್ದಾಗಿ, ವಾರಕ್ಕೆರಡಾವರ್ತಿ ಪ್ರಕಟವಾಗುತ್ತ, ಇದುವರೆಗೂ ನಡೆದುಕೊಂಡು ಬಂದಿದೆ. ಇತರ ದೇಶಗಳಲ್ಲಿಯೂ ಇಂಥಾ ಸರಕಾರೀ (ಗೆಜೆಟ್) ವೃತ್ತಪತ್ರಿಕೆಗಳು ಈಗ ಸಾಮಾನ್ಯವಾಗಿವೆ. ತಮ್ಮ ಕಾರ್ಯಕಲಾಪಗಳನ್ನೂ ಉದ್ದೇಶ್ಯ ವಿಧಾನಗಳನ್ನೂ ಕಾಲ ಕಾಲಕ್ಕೆ ಕ್ರಮವಾಗಿ ಜನರಿಗೆ ತಿಳಿಯಪಡಿಸುವುದು ತಮ್ಮ ಅವಶ್ಯ ಕರ್ತವ್ಯವೆಂದು ಎಲ್ಲ ಸರಕಾರಗಳವರೂ ಈಗ ಒಪ್ಪಿಕೊಂಡಿದ್ದಾರೆ.

"ಲಂಡನ್ ಗೆಜೆಟ್" ಹುಟ್ಟಿದ ಮೇಲೆ ಇತರ ಸ್ವತಂತ್ರ ಪತ್ರಿಕೆಗಳ ಪ್ರಾಬಲ್ಯವೇನೂ ಕಡಿಮೆಯಾಗಲಿಲ್ಲ, ಹೆಚ್ಚೇ ಆಯಿತು. ಪತ್ರಿಕೆಯನ್ನು ಹೊರಡಿಸಬೇಕೆನ್ನುವವರು ಮೊದಲು ಸರಕಾರದ ಅನುಮತಿಯನ್ನು ಪಡೆಯಬೇಕೆಂಬ ನಿರ್ಬಂಧವೂ, ಪಾರ್ಲಿಮೆಂಟಿನ ನಡೆವಳಿಕೆಗಳ ವರ್ಣನೆಯನ್ನು ಮುದ್ರಿಸಕೂಡದೆಂಬ ವಿಧಿಯೂ ೧೬೯೫ರಲ್ಲಿ ನಿವಾರಣೆಯಾದವು. ಅಲ್ಲಿಂದೀಚೆಗೆ ಒಂದೆರಡು ದಿನಪತ್ರಿಕೆಗಳ ಪ್ರಯತ್ನಗಳಾದುವು. ೧೭೦೦ರಿಂದೀಚೆಗೆ ಡೀಫೋ (Defoe), ಸ್ಟೀಲ್ (Steele), ಅಡಿಸನ್ (Addison) ಎಂಬ ಪ್ರತಿಭಾಸಂಪನ್ನರಾದ ಗದ್ಯ ಕವಿಗಳು ಪತ್ರಿಕಾಲೇಖಕರಾಗಿ ನಿಂತು, ಕಾವ್ಯ ಶಾಸ್ತ್ರಗಳ ವಿಷಯಗಳನ್ನೂ ಸಮಾಜದ ನೀತಿ ಸಂಪ್ರದಾಯಗಳ ವಿಷಯಗಳನ್ನೂ ಸಹ ಕುರಿತು ಕಥೆ ಪ್ರಹಸನ ಉಪನ್ಯಾಸಗಳ ರೂಪದಲ್ಲಿ ವಿಮರ್ಶೆ ಮಾಡಿ, ಜನರಿಗೆ ವಿನೋದವನ್ನೂ ಬೋಧನೆಯನ್ನೂ ಒದಗಿಸತೊಡಗಿದರು. ೧೭೧೧ರ ವೇಳೆಗೆ ಇಂಗ್ಲೆಂಡಿನಲ್ಲಿ ವಾರ ಒಂದಕ್ಕೆ ಎಲ್ಲಾ ಪತ್ರಿಕೆಗಳೂ ಸೇರಿ ಸುಮಾರು ೪೪,೦೦೦ ಪ್ರತಿಗಳು ಪ್ರಚಾರವಾಗುತ್ತಿದ್ದವೆಂದು ತಿಳಿದು ಬಂದಿದೆ.

ಪತ್ರಿಕೆಗಳ ಈ ಅಭಿವೃದ್ಧಿಯನ್ನು ಆ ಕಾಲದಲ್ಲಿ ಸರಕಾರದವರು ಸಹಿಸಲಾರದೆ ಹೋದುದು ಆಶ್ಚರ್ಯವೇನೂ ಅಲ್ಲ. ೧೭೧೨ರಲ್ಲಿ ಪತ್ರಿಕೆಗಳ ಮೇಲೆ ಒಂದು ತೆರಿಗೆಯನ್ನು ಹಾಕಿದರು. ಅನೇಕ ಮಂದಿ ಪತ್ರಕರ್ತರ ಮೇಲೆ ವ್ಯವಹಾರಗಳನ್ನೂ ಹೂಡಿದರು. ೧೭೬೩ರಲ್ಲಿ "ನಾರ್ತ್ ಬ್ರಿಟನ್" ಎಂಬ ಪತ್ರಿಕೆಯ ಸಂಪಾದಕನಾದ "ಜಾನ್ ವಿಲ್ಕ್ಸ್" ಎಂಬಾತನ ಮೇಲೆ ರಾಜದ್ರೋಹದ ಅಪರಾಧವು ಆಪಾದನೆಯಾಗಲು, ಅದರಿಂದ ಸಾಮಾನ್ಯ ಜನರಿಗೆ ಆತನ ವಿಷಯದಲ್ಲಿದ್ದ ಅಭಿಮಾನೋತ್ಸಾಹಗಳು ಮತ್ತಷ್ಟು ಅತಿಶಯವಾಗಿ ಪ್ರಕಾಶಗೊಂಡು, ಪತ್ರಿಕಾ ಸ್ವಾತಂತ್ರ್ಯವು ವಿಶಾಲಪಡಲು ಮಾರ್ಗವಾಯಿತು. ೧೭೭೦ರ ವೇಳೆಗೆ "ಜ್ಯೂನಿಯಸ್" ಎಂಬ ಕೃತಕ ನಾಮಧೇಯದಿಂದ ಒಬ್ಬಾನೊಬ್ಬ ಸಮರ್ಥ ಲೇಖಕನು ಆ ಕಾಲದ ರಾಜಕೀಯ ವಿದ್ಯಮಾನಗಳ ಮೇಲೆ ತೀಕ್ಷ್ಣಗಳಾದ ವ್ಯಾಖ್ಯಾನಗಳನ್ನು ಬರೆದು "ಪಬ್ಲಿಕ್ ಅಡ್ವರ್ಟೈಸರ್" ಎಂಬ ಪತ್ರಿಕೆಯಲ್ಲಿ ಪ್ರಕಟಗೊಳಿಸುತ್ತಿದ್ದನು. ಇದೇ ಮೊದಲಾದ ಕಾರಣಗಳಿಂದ ಜನರ ಪತ್ರಿಕಾಭಿರುಚಿಯು ಬೆಳೆಯುತ್ತ ಬಂತು. ಇಂಗ್ಲೆಂಡಿಗೆ ಫ್ರಾನ್ಸ್ ಮೊದಲಾದ ದೇಶಗಳೊಡನೆ ಆಗಾಗ ಒದಗುತ್ತಿದ್ದ ಯುದ್ಧ ಪ್ರಸಂಗಗಳ ದೆಸೆಯಿಂದಲೂ, ಇಂಗ್ಲೆಂಡಿನ ಜನರು ಇಂಡಿಯಾ ಮೊದಲಾದ ದೂರ ದೇಶಗಳಲ್ಲಿ ಸಂಚಾರ ಮಾಡುತ್ತಲೂ ನೆಲಸುತ್ತಲೂ ಇದ್ದ ದೆಸೆಯಿಂದಲೂ, ಇಂಗ್ಲೆಂಡಿಗೂ ಅಮೆರಿಕಕ್ಕೂ ಮನಸ್ತಾಪಗಳು ಬೆಳೆಯುತ್ತಿದ್ದ ದೆಸೆಯಿಂದಲೂ ಇಂಗ್ಲಿಷ್ ಜನರಿಗೆ ಸ್ವದೇಶ ವಿದೇಶಗಳ ವೃತ್ತಾಂತಗಳನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವು ವೃದ್ಧಿಯಾಗುತ್ತಿತ್ತು. ಹೀಗೆ ಪತ್ರಿಕಾ ಪ್ರಚಾರವೂ ಅವುಗಳ ಪ್ರಾಬಲ್ಯವೂ ಹೆಚ್ಚಿದವು. ಕಡೆಗೆ ೧೭೭೧ರಲ್ಲಿ ಪತ್ರಿಕೆಗಳ ಮೇಲಿನ ರಾಜಕೀಯ ನಿರ್ಬಂಧಗಳು ಬಹುಮಟ್ಟಿಗೆ ಸಡಲಿದವು. ತೆರಿಗೆಯು ಮಾತ್ರ ಇನ್ನೂ ಹೆಚ್ಚುತ್ತಲೇ ಇದ್ದು ೧೮೩೬ರಿಂದ ಅದೂ ಇಳಿಯಲಾರಂಭಿಸಿತು. ೧೮೫೫ರಲ್ಲಿ ಈ ತೆರಿಗೆಯು ಸಂಪೂರ್ಣವಾಗಿ ಪರಿಹಾರವಾಯಿತು. ಅಲ್ಲಿಂದೀಚೆಗೆ ಇಂಗ್ಲಿಷ್ ಪತ್ರಿಕೆಗಳ ಬೆಳವಣಿಗೆಯು ಸರ್ವಸ್ವತಂತ್ರವಾಗಿ, ನಿರಾತಂಕವಾಗಿ ನಡೆದುಕೊಂಡುಬಂದಿದೆ.

## ಇಂಗ್ಲೆಂಡಿನ ಕೆಲವು ಪ್ರಸಿದ್ಧ ಪತ್ರಿಕೆಗಳು

ಇಂಗ್ಲೆಂಡಿನಲ್ಲಿ ಈಗ ಇರುವ ದಿನಪತ್ರಿಕೆಗಳಲ್ಲೆಲ್ಲಾ ೧೭೭೨ರಲ್ಲಿ ಹುಟ್ಟಿದ "ಮಾರ್ನಿಂಗ್ ಪೋಸ್ಟ್" ಎಂಬುದೇ ಅತ್ಯಂತ ಪುರಾತನವಾದುದು. ಲೋಕ ಪ್ರಸಿದ್ಧವಾದ (ಲಂಡನ್) "ಟೈಮ್ಸ್" ಪತ್ರಿಕೆಯು ೧೭೮೫ರಲ್ಲಿ ಹೊರಟದ್ದು. ಇದು ಇಂಗ್ಲೆಂಡ್ ದೇಶದ ಒಂದು ಮುಖ್ಯ ಸಾರ್ವಜನಿಕ ಸಂಸ್ಥೆಯೆಂದು ಸಾಮಾನ್ಯವಾಗಿ ಅಂಗೀಕರಿಸಲ್ಪಟ್ಟಿದೆ. ಇದರ ವಾರ್ತಾ ಲೇಖಕರು ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಇದ್ದಾರೆ. ಇದರ ವ್ಯಾಪನೆಯೂ, ಇದಕ್ಕಿರುವ ಗೌರವವೂ, ಇದರೊಡನೆ ಪ್ರಕಟವಾಗುವ ಉಪಪತ್ರಿಕೆಗಳ ಪ್ರಚಾರವೂ ಅನನ್ಯವಾದುವು. ಈ ಉಪಪತ್ರಿಕೆಗಳು—(೧) ಸಾಹಿತ್ಯ, (೨) ವಿದ್ಯಾ ಪ್ರಚಾರ, (೩) ಶಿಲ್ಪ (ಎಂಜಿನೀರಿಂಗ್) ಮತ್ತು ಯಂತ್ರಕರ್ಮ ವಾಣಿಜ್ಯ—ಈ ಮೂರು ವಿಷಯಗಳಿಗೆ ಸಂಬಂಧಪಟ್ಟವಾಗಿ, ವಾರ ವಾರವೂ ಬೇರೆ ಬೇರೆಯಾಗಿ ಪ್ರಕಟವಾಗುತ್ತವೆ. ಇವಲ್ಲದೆ ವಿಶೇಷ ಸಂದರ್ಭಗಳಲ್ಲಿ ವಿಶೇಷ ಸಂಚಿಕೆಗಳೂ ಹೊರಡುವುದುಂಟು.

ಇಂಗ್ಲೆಂಡಿನ ಮತ್ತೊಂದು ಪ್ರಸಿದ್ಧ ದಿನಪತ್ರಿಕೆ "ಡೆಯಿಲೀ ಮೆಯಿಲ್" ಎಂಬುದು. ಇದು ಅಗ್ಗವಾದ, ಸಾಮಾನ್ಯಜನರಂಜಕವಾದ ಪತ್ರಿಕೆ. ಆಲ್‌ಫ್ರೆಡ್ ಹಾರ್ಮ್ಸ್‌ವರ್ತ್ (ಲಾರ್ಡ್ ನಾರ್ತ್‌ಕ್ಲಿಫ್) ಎಂಬಾತನು ಇದನ್ನು ೧೮೯೬ರಲ್ಲಿ ಪ್ರಾರಂಭಿಸಿದನು. ಆಗ ಆತನು ಹಾಕಿದ ಬಂಡವಾಳ ೧೫ ಸಾವಿರ ಪೌಂಡು. ೧೯೨೧ರಲ್ಲಿ ಆ ಬಂಡವಾಳ ೨೧ ಲಕ್ಷ ಪೌಂಡಾಗಿ ಬೆಳೆದಿತ್ತು. ಈ ಪತ್ರಿಕೆಯು "ಅಸೋಸಿಯೇಟೆಡ್ ನ್ಯೂಸ್‌ಪೇಪರ್ಸ್" ಎಂಬ ಕಂಪೆನಿಯ (ವ್ಯಾಪಾರ ಸಂಘದ) ಸ್ವತ್ತು. ಪತ್ರಿಕೆಗೆ ಬೇಕಾದ ಕಾಗದವನ್ನು ಒದಗಿಸುವುದಕ್ಕಾಗಿ ಆ ಕಂಪೆನಿಯವರು ನ್ಯೂಫೌಂಡ್‌ಲೆಂಡ್ ದ್ವೀಪದಲ್ಲಿ ೩,೪೦೦ ಚದರ ಮೈಲಿಗಳಷ್ಟು ವಿಸ್ತೀರ್ಣವಾದ ಭೂಮಿಯನ್ನು ತೆಗೆದುಕೊಂಡು, ಅದರಲ್ಲಿ ಕಾಡುಗಳನ್ನು ಬೆಳೆಸಿ, ಕಾರ್ಖಾನೆಗಳನ್ನಿಡಿಸಿ, ವರ್ಷಂಪ್ರತಿ ೫೦ ಸಾವಿರ ಟನ್ ತೂಕದಷ್ಟು ಕಾಗದವನ್ನು ತಯಾರು ಮಾಡಿಸುತ್ತಾರೆ. ಲಂಡನ್ನಿನಲ್ಲಿರುವ "ಡೆಯಿಲೀ ಮೆಯಿಲ್"

ಮುದ್ರಣಾಲಯವೂ ಬಹು ದೊಡ್ಡದು. ಅದರಲ್ಲಿ ಅಕ್ಷರಗಳನ್ನು ಎರಕ ಹುಯ್ದು ಜೋಡಿಸುವುದಕ್ಕೂ, ಭಾವಚಿತ್ರಗಳನ್ನು ತೆಗೆದು ಪಡಿಯಚ್ಚು(ಬ್ಲಾಕು)ಗಳನ್ನು ತಯಾರುಮಾಡುವುದಕ್ಕೂ, ಪತ್ರಿಕೆಯನ್ನು ಮುದ್ರಿಸಿ ಮಡಿಸಿ ಕೊಡುವುದಕ್ಕೂ ಇರುವ ನಾನಾ ಯಂತ್ರ ಸಾಧನಗಳು ಅದ್ಭುತಗಳಾಗಿ, ಅತಿ ವೇಗದಿಂದ ಕೆಲಸ ಮಾಡತಕ್ಕವುಗಳಾಗಿವೆ. ಈ ಪತ್ರಿಕೆಯನ್ನು ಹಂಚುವುದಕ್ಕೆ ಸೂರಾರು ಸ್ವಂತ ಮೋಟಾರು ಗಾಡಿಗಳು ಸಿದ್ಧವಾಗಿರುತ್ತವೆ. ''ಡೆಯಿಲೀ ಮೆಯಿಲ್'' ಪತ್ರಿಕೆಯು ೧೯೨೧ರಲ್ಲಿ ಪ್ರತಿದಿನವೂ ೧೮,೭೨,೭೯೪ ಪ್ರತಿಗಳಂತೆ ಹಂಚಿಕೆಯಾಗುತ್ತಿತ್ತು.

ಲಂಡನ್ನಿನ ಇತರ ದಿನಪತ್ರಿಕೆಗಳಲ್ಲಿ ''ಡೆಯಿಲೀ ನ್ಯೂಸ್'', ''ಡೆಯಿಲೀ ಟೆಲೆಗ್ರಾಫ್'', ''ಈವಿನಿಂಗ್ ಸ್ಟ್ಯಾಂಡರ್ಡ್'', ''ಸ್ಟಾರ್'', ''ಡೆಯಿಲೀ ಹೆರಾಲ್ಡ್'' (ಇದು ''ಲೇಬರ್'' ಅಥವಾ ಕಾರ್ಮಿಕ ಪಕ್ಷದವರದು)—ಇವು ಮುಖ್ಯವಾದುವು. ಇಂಗ್ಲೆಂಡಿನ ಇತರ ಮುಖ್ಯ ಪಟ್ಟಣಗಳ ಪೈಕಿ ಮ್ಯಾಂಚೆಸ್ಟರ್ ನಗರದ ''ಗಾರ್ಡಿಯನ್'' ಪತ್ರಿಕೆಯು ಅತ್ಯಂತ ಪ್ರಸಿದ್ಧವಾದುದು. ಅದರಲ್ಲಿಯ ಲೇಖನಗಳು ಉತ್ತಮ ಶೈಲಿಯವಾಗಿಯೂ, ಅದರ ವಿಚಾರ ಸರಣಿಯು ಉದಾರಭಾವದಿಂದ ಕೂಡಿದುದಾಗಿಯೂ ಇರುತ್ತವೆ. ಅದರ ಮುಖ್ಯ ಸಂಪಾದಕರಾದ ಸಿ. ಪಿ. ಸ್ಕಾಟ್ ಎಂಬವರು ಈಗ ೫೦ ವರ್ಷಗಳಿಂದ ಅದೇ ಉದ್ಯೋಗದಲ್ಲಿದ್ದುಕೊಂಡು, ಬ್ರಿಟಿಷ್ ವೃತ್ತಪತ್ರಿಕಾಕರ್ತ ಮಂಡಲಿಗೆ ಕಿರೀಟಪ್ರಾಯರಾಗಿದ್ದಾರೆ.

ಇಂಗ್ಲೆಂಡಿನ ಪತ್ರಿಕೆಗಳಲ್ಲಿ ಅತ್ಯಂತ ಪ್ರಖ್ಯಾತವಾಗಿ ನಮ್ಮ ಗಮನಕ್ಕೆ ವಿಶೇಷಾರ್ಹವಾಗಿರುವ ಮತ್ತೊಂದು ಪ್ರಕಟನೆ ''ಪಂಚ್'' ಎಂಬುದು. ಇದು ಹಾಸ್ಯಪ್ರಧಾನವಾದುದು. ಇದು ವಾರಕ್ಕೊಂದು ಸಲ ಲಂಡನ್ನಿನಿಂದ ಹೊರಡತಕ್ಕುದು. ಇದರಲ್ಲಿ ಪ್ರಸಿದ್ಧ ಜನರನ್ನೂ, ಅವರ ನಡೆ ನುಡಿಗಳನ್ನೂ ಚಿತ್ರ ವಿಚಿತ್ರ ವೇಷಗಳಲ್ಲಿ ತೋರಿಸುವ ಆಕಾರ ವಿಕಾರಗಳೂ, ಸಮಾಜದ ರೀತಿ ನೀತಿಗಳಲ್ಲಿರುವ ನ್ಯೂನಾತಿರೇಕಗಳನ್ನು ಮನದಟ್ಟುವಂತೆ ತೋರಿಸುವ ಪ್ರಹಸನ, ಕಟ್ಟುಕಥೆ,

ಉಪನ್ಯಾಸ, ಪದ್ಯ, ಹಾಡು, ಪತ್ರವ್ಯವಹಾರ, ಪ್ರಾಸ್ತಾವಿಕ ಸಂಭಾಷಣೆ—ಇವೇ ಮೊದಲಾದ ನಾನಾ ಪ್ರಬಂಧಗಳೂ ತುಂಬಿರುತ್ತವೆ. ಅದರ ಹಾಸ್ಯವು ಮರ್ಯಾದಾನುಸಾರವಾದುದಾಗಿಯೂ ಗಂಭೀರವಾಗಿಯೂ ಮೃದು ಮಧುರವಾಗಿಯೂ ಇರುತ್ತದೆ. ಈ ಪತ್ರಿಕೆಯೂ ಇಂಗ್ಲೆಂಡ್ ದೇಶದ ಅತಿಮುಖ್ಯ ಸಾರ್ವಜನಿಕ ಸಂಸ್ಥೆಗಳಲ್ಲಿ ಒಂದು.

ಮುಖ್ಯ ನಗರಗಳಿಂದ ಹೊರಡುವ ಈ ಪ್ರಸಿದ್ಧ ಪತ್ರಿಕೆಗಳ ಜೊತೆಗೆ ಬ್ರಿಟನ್ ದ್ವೀಪದ ನಾನಾ ಪ್ರಾಂತ, ನಾನಾ ಜಿಲ್ಲೆಗಳ ವಿಶೇಷ ಪ್ರಯೋಜನಕ್ಕಾಗಿ ಆಯಾ ಪ್ರದೇಶಗಳಲ್ಲಿಯೇ ದಿನಪತ್ರಿಕೆಗಳೂ, ವಾರಕ್ಕೆ ಮೂರು, ಎರಡು ಅಥವಾ ಒಂದಾವರ್ತಿ ಪ್ರಕಟವಾಗುವ ಪತ್ರಿಕೆಗಳೂ ಇರುತ್ತವೆ. ಇವುಗಳಲ್ಲದೆ ಬಗೆ ಬಗೆಯ ಶಾಸ್ತ್ರಗಳು, ಬಗೆ ಬಗೆಯ ಕಸಬುಗಳು, ಬಗೆ ಬಗೆಯ ವ್ಯಾಪಾರಗಳು, ಬಗೆ ಬಗೆಯ ಕಲೆ ಕುಶಲ ವಿದ್ಯೆಗಳು—ಇವುಗಳಿಗೋಸ್ಕರವಾಗಿಯೇ ಪ್ರತ್ಯೇಕ ಪ್ರತ್ಯೇಕವಾದ ಪತ್ರಿಕೆಗಳಿವೆ. ಗಂಡಸರ ದರ್ಜಿಯವರಿಗೋಸ್ಕರವೇ ಒಂದು, ಹೆಂಗಸರ "ಫ್ಯಾಷನ್"(ಅಲಂಕಾರ)ಗಳಿಗೋಸ್ಕರವೇ ಬೇರೊಂದು, ಕೋಳಿಸಾಕುವವರಿಗೋಸ್ಕರವೇ ಒಂದು, ಎಣ್ಣೆಯ ವ್ಯಾಪಾರಕ್ಕೋಸ್ಕರವೇ ಒಂದು, ದಾದಿಯ ಕೆಲಸದವರಿಗೋಸ್ಕರವೇ ಒಂದು, ಪಾದರಕ್ಷೆ ಮಾಡುವವರಿಗೋಸ್ಕರವೇ ಒಂದು—ಈ ರೀತಿ ನೂರಾರು ವರ್ತಕತನ ವ್ಯವಸಾಯೋದ್ಯೋಗಗಳ ಪತ್ರಿಕೆಗಳಿವೆ. ೧೯೨೧ನೆಯ ಇಸವಿ ಜನವರಿ ತಿಂಗಳ ಪತ್ರಿಕಾ ಸಂಖ್ಯೆಯ ವಿವರ ಹೀಗೆಂದರೆ:—

| | ಬೆಳಗಿನವು | ಸಂಜೆಯವು | ಒಟ್ಟು |
|---|---|---|---|
| ಲಂಡನ್ ಪಟ್ಟಣದಲ್ಲಿ ದಿನಪತ್ರಿಕೆಗಳು | ೨೧ | ೫ | ೨೬ |
| ,, ಇತರ ,, | .. | .. | ೩೬೬ |
| ಇಂಗ್ಲೆಂಡಿನ ನಾನಾ ಪ್ರಾಂತಗಳ ದಿನಪತ್ರಿಕೆಗಳು | ೩೫ | ೮೦ | ೧೧೫ |
| ,, ,, ಇತರ ,, | .. | .. | ೧,೨೩೮ |
| ಸ್ಕಾಟ್ಲೆಂಡಿನ ದಿನಪತ್ರಿಕೆಗಳು | ೬ | ೧೦ | ೧೬ |
| ,, ಇತರ ,, | .. | .. | ೨೧೨ |

| | ಬೆಳಗಿನವು | ಸಂಜೆಯವು | ಒಟ್ಟು |
|---|---|---|---|
| ಐರ್ಲೆಂಡಿನ ದಿನಪತ್ರಿಕೆಗಳು | ೮ | ೫ | ೧೩ |
| ,, ಇತರ ,, | .. | .. | ೧೪೪೮ |
| ಬ್ರಿಟಿಷಾ ಉಪದ್ವೀಪಗಳ ದಿನಪತ್ರಿಕೆಗಳು | .. | .. | ೫ |
| ,, ,, ಇತರ ,, | .. | .. | ೧೧ |
| ಬ್ರಿಟಿಷ್ ದ್ವೀಪಸಮುದಾಯದ ಒಟ್ಟು | .. | .. | ೨,೧೫೦ |

ಈ ನಾನಾ ಪತ್ರಿಕೆಗಳಲ್ಲಿ ಬಹುಮಟ್ಟಿಗೆ ಎಲ್ಲವೂ ವಿಸ್ತಾರವಾಗಿ ಸಂಚಾರವಮಾಡಿ ಲಾಭ ಸಂಪಾದಿಸತಕ್ಕವುಗಳೇ. ನಷ್ಟಪಟ್ಟುಕೊಂಡು ನಡೆಯುತ್ತಿರುವವು ಅಪರೂಪವೆಂದೇ ಹೇಳಬೇಕು. ಒಂದುವೇಳೆ ಯಾವ ಪತ್ರಿಕೆಯಾದರೂ ನಷ್ಟಪಡುತ್ತಿದ್ದರೆ ಅದರ ಚಾಲಕರು ಅದನ್ನು ಮತ್ತೊಂದು ಪತ್ರಿಕೆಯೊಡನೆ ಸೇರಿಸಿಯೋ, ಅಥವಾ ಅದಕ್ಕೆ ಯಾವುದಾದರೊಂದು ಸಂಘದ ಆಶ್ರಯವನ್ನು ದೊರಕಿಸಿಯೋ, ಅಥವಾ ಆದರಲ್ಲಿಯ ವಿಷಯ ಕಲಾಪವನ್ನು ವಿಶಾಲಪಡಿಸಿಯೋ, ಅದನ್ನು ಲಾಭ ಕಾರಿಯಾಗಿ ಮಾಡುವ ಉಪಾಯವನ್ನು ಹುಡುಕುತ್ತಾರೆ. "ಟೈಮ್ಸ್" ಪತ್ರಿಕೆಯ ಸಾಹಿತ್ಯ ಸಂಬಂಧವಾದ ಉಪಪತ್ರಿಕೆಯು ವಿದ್ವಾಂಸರಾದವರಿಗೆ ರುಚಿಸತಕ್ಕುದು. ಅಂಥಾ ಉದ್ದಾಮವಾದ ವಾರಪತ್ರಿಕೆಯೇ ೩೦ ಸಾವಿರಕ್ಕೆ ಕಡಿಮೆಯಿಲ್ಲದೆ ಹಂಚಿಕೆಯಾಗುತ್ತದೆ. ಈ ಒಂದು ಸಂಗತಿಯಿಂದಲೇ ಆ ದೇಶದಲ್ಲಿ ಪತ್ರಿಕಾ ಪ್ರಾಚುರ್ಯವು ಎಷ್ಟುಮಟ್ಟಿಗೆ ಇದೆ ಎಂಬುದನ್ನು ಊಹಿಸಬಹುದು.

## ಪತ್ರಿಕೆ—ರಾಜ್ಯಕಾರ್ಯ

ಫ್ರಾನ್ಸ್, ಜರ್ಮನಿ ಮೊದಲಾದ ಇತರ ಐರೋಪ್ಯ ರಾಜ್ಯಗಳಲ್ಲಿಯೂ ಅಮೆರಿಕದಲ್ಲಿಯೂ ವೃತ್ತಪತ್ರಿಕಾ ಪ್ರಾಚುರ್ಯವು ಇಂಗ್ಲೆಂಡಿನಲ್ಲಿರುವಂತೆಯೇ ಇದೆ. ಈ ಪಾಶ್ಚಾತ್ಯ ರಾಷ್ಟ್ರಗಳಲ್ಲಿಯೂ ಏಷ್ಯಾ ಖಂಡದ ಜಪಾನ್ ಚೀನಾಗಳಲ್ಲಿಯೂ ಕೂಡ ಪತ್ರಿಕೆಗಳ ಸಂಚಾರವೂ, ಅವುಗಳ ವಿವಿಧತೆಯೂ ಎಷ್ಟು ಹೆಚ್ಚಾಗಿದೆ ಎಂಬುದನ್ನು "ಮಿಚ್ಚೆಲ್ಸ್ ನ್ಯೂಸ್‌ಪೇಪರ್ ಪ್ರೆಸ್ ಡೈರೆಕ್ಟರಿ" (Mitc-

hell's Newspaper Press Directory) ಮೊದಲಾದ ವಾರ್ಷಿಕ ಪ್ರಕಟನೆಗಳಲ್ಲಿ ಕಾಣಬಹುದು. ಮುಖ್ಯವಾಗಿ, ಪಾಶ್ಚಾತ್ಯ ರಾಷ್ಟ್ರಗಳಲ್ಲಿ ರಾಜ್ಯಾಧಿಕಾರವು ಪ್ರಜೆಗಳ ಕೈಯಲ್ಲೇ ಇರುವ ಕಾರಣದಿಂದಲೂ, ತಾವು ತೆರಬೇಕಾದ ಕಂದಾಯ ಸುಂಕಗಳು ಸರಕಾರದ ನಡೆವಳಿಕೆಗಳಿಗೆ ಅನುಸಾರವಾಗಿ ಹೆಚ್ಚಬಹುದು ಅಥವಾ ತಗ್ಗಬಹುದು—ಎಂಬ ತಿಳಿವಳಿಕೆಯೂ, ತಮ್ಮ ತೆರಿಗೆಗಳನ್ನೂ ವಿಧೇಯತೆಯನ್ನೂ ಸರಕಾರವು ದೇಶಕ್ಕೆ ಪ್ರಯೋಜನವಾಗುವಂತೆ ಉಪಯೋಗಿಸುತ್ತಿದೆಯೆ, ಇಲ್ಲವೆ—ಎಂಬುದನ್ನು ತಾವು ಯಾವಾಗಲೂ ಕಾದು ನೋಡುತ್ತಿರಬೇಕೆಂಬ ಆಸಕ್ತಿಯೂ ಆ ಜನರಿಗೆ ಹೆಚ್ಚಾಗಿರುವುದರಿಂದಲೂ, ಅವರಿಗೆ ರಾಜಕೀಯ ವಿಚಾರ ಕುತೂಹಲವು ನಮಗಿಂತ ಹೆಚ್ಚಾಗಿದೆ. ಇದರಿಂದ ಅವರಿಗೆ ವೃತ್ತಪತ್ರಿಕೆಗಳು ಅನ್ನೋದಕಗಳಂತೆ ಜೀವನದ ಅವಶ್ಯ ವಸ್ತುಗಳಾಗಿವೆ. ಪತ್ರಿಕೆಗಳು ಬೆಳೆದಂತೆಲ್ಲ ಜನರ ರಾಜಕೀಯ ಪರಿಜ್ಞಾನವು ಬೆಳೆಯುತ್ತದೆ; ರಾಜಕೀಯ ಪರಿಜ್ಞಾನವು ಬೆಳೆದಂತೆಲ್ಲ ಪತ್ರಿಕಾ ಪ್ರಾಬಲ್ಯವು ಮತ್ತಷ್ಟು ಬೆಳೆಯುತ್ತದೆ. ಈ ಪರಸ್ಪರೋತ್ಕರ್ಷವೇ ಜನ ಜೀವನೋಚ್ಛ್ರಾಯದ ರಾಜಮಾರ್ಗ. ಇದು ಪಾಶ್ಚಾತ್ಯ ದೇಶಗಳಲ್ಲಿ ಚೆನ್ನಾಗಿ ಕಂಡುಬರುತ್ತಿದೆ.

## ಹಿಂದುಸ್ಥಾನದಲ್ಲಿ ಪತ್ರಿಕಾರಂಭ

ಇಂಡಿಯಾದೇಶದಲ್ಲಿ ವೃತ್ತಪತ್ರಿಕೆಯೊಂದು ಮೊದಲು ಹೊರಟದ್ದು ವಾರನ್ ಹೇಸ್ಟಿಂಗ್ಸ್ ಪ್ರಭುವಿನ ಕಾಲದಲ್ಲಿ. ಹಿಕ್ಕೀ ಎಂಬಾತನು ಆಗ—ಎಂದರೆ ಕ್ರಿ. ಶ. ೧೭೮೧ರಲ್ಲಿ—ತನ್ನ ಹೆಸರಿನಿಂದಲೇ "ಹಿಕ್ಕೀ'ಸ್ ಗೆಜೆಟ್" ಎಂಬ ಪತ್ರಿಕೆಯನ್ನಾರಂಭಿಸಿದನು. ಅಲ್ಲಿಂದೀಚೆಗೆ ಹುಟ್ಟಿದ ಅನೇಕ ಪತ್ರಿಕೆಗಳ ಪೈಕಿ ಪುರಾತನವಾಗಿ ಈಗಲೂ ಜೀವಿಸಿರತಕ್ಕದು ಕಲ್ಕತ್ತೆಯ "ಇಂಗ್ಲಿಷ್ ಮ್ಯಾನ್" (೧೮೨೧). ಮೊದಮೊದಲು ಹುಟ್ಟಿದ ಪತ್ರಿಕೆಗಳು ಬಹುಕಾಲ ಬದುಕುವುದು ಎಲ್ಲಿಯೂ ಅಪರೂಪವೇ. ಜನರಿಗೆ ಲೋಕವಾರ್ತೆಯಲ್ಲಿ ಅಭಿರುಚಿಯನ್ನೂ ವಾಚನಾಭ್ಯಾಸವನ್ನೂ ಉಂಟುಮಾಡಿಕೊಡುವಷ್ಟರೊಳ

ಗಾಗಿಯೇ ಅವುಗಳ ಶಕ್ತಿ ಕುಗ್ಗುವುದು. ಆದರೆ ಅವು ಮಾಡಿದ ಪ್ರಯತ್ನ
ದಿಂದ ಅವುಗಳ ತರುವಾಯ ಬರತಕ್ಕವುಗಳಿಗೆ ಒಳ್ಳೆಯ ಅವಕಾಶವ
ಸಿದ್ಧಪಟ್ಟಿರುವುದು. ೧೮೩೭ರ ವೇಳೆಗೆ ಇಂಡಿಯಾದೇಶದಲ್ಲಿ ಆರ
ಯುರೋಪ್ಯ ಪತ್ರಿಕೆಗಳೂ, ಐದು ದೇಶೀಯ ಪತ್ರಿಕೆಗಳೂ ಆಗಿದ್ದವು
೧೮೬೦ರ ವೇಳೆಗೆ ೪೪ ಹಿಂದೂಸ್ತಾನೀ ಪತ್ರಿಕೆಗಳಾಗಿದ್ದುವಂತೆ
೧೮೬೩ರಲ್ಲಿ ದೇಶೀಯ ಸಂಪಾದಿತವಾದ ಮೊಟ್ಟಮೊದಲನೆಯ ಇಂಗ್ಲಿಷ
ದಿನ ಪತ್ರಿಕೆ—"ಇಂಡಿಯನ್ ಮಿರ್ರರ್" ಅಥವಾ "ಭಾರತೀಯ
ದರ್ಪಣ" ಎಂಬುದು—ಕಲ್ಕತ್ತೆಯಲ್ಲಿ ಹೊರಟಿತು. ಪ್ರಸಿದ್ಧವಾದ
ಇಂಗ್ಲಿಷ್ "ಅಮೃತಬಜಾರ್ ಪತ್ರಿಕೆ"ಯು ೧೮೬೮ರಲ್ಲಿ ಜನ್ಮವೆತ್ತಿತು
"ಬೆಂಗಾಲೀ" (ಇಂಗ್ಲಿಷ್) ಪತ್ರಿಕೆಯು ೧೮೫೮ರಲ್ಲಿಯೂ, ವಂಗ
ಭಾಷೆಯ ದೈನಿಕವಾದ "ಆನಂದ ಬಜಾರ್ ಪತ್ರಿಕೆ"ಯು ೧೮೭೮
ರಲ್ಲಿಯೂ ಕಾಣಿಸಿಕೊಂಡವು. ಇದೇ ವರ್ಷದಲ್ಲಿಯೇ ಮದ್ರಾಸಿ
"ಹಿಂದೂ" (ಇಂಗ್ಲಿಷ್) ದೈನಿಕವು ಹುಟ್ಟಿದ್ದು. ಬೊಂಬಾಯಿ ಕ
೧೮೫೧ರಲ್ಲಿಯೇ ದಾದಾಭಾಯಿ ನವರೋಜಿಯವರು "ರಾಸ್
ಗೋಫ್ತರ್" (ಸತ್ಯವಾದಿ) ಎಂಬ ಗುಜರಾತೀ ವಾರಪತ್ರಿಕೆಯನ್ನು
ಉಪಕ್ರಮಿಸಿದ್ದರು. ಪುಣೆಯಿಂದ ಈಗಲೂ ಪ್ರಕಟವಾಗುತ್ತಿರು
"ಜ್ಞಾನ ಪ್ರಕಾಶ"ವೆಂಬ ಮರಾಠೀ ದೈನಿಕವು ಅದಕ್ಕಿಂತ ಹಿಂದೆ—
೧೮೪೭ರಲ್ಲಿಯೇ—ಹುಟ್ಟಿತ್ತು. ಈ ರೀತಿಯಾಗಿ ಇಂಡಿಯಾ ದೇಶ
ನಾನಾ ಭಾಗಗಳಲ್ಲಿ ಬಹಳ ವರ್ಷಗಳ ಹಿಂದೆಯೇ ಪತ್ರಿಕಾ ಪ್ರಕಟನೆಯು
ಆರಂಭವಾಯಿತು.

## ಕರ್ಣಾಟಕದಲ್ಲಿ

ಕನ್ನಡ ನಾಡಿನಲ್ಲಿ "ಹಿತೇಚ್ಛು"ವೆಂಬುದು ೧೮೭೦ರಲ್ಲಿ ಕಲಾದಗಿ
ಯಿಂದ ಪ್ರಚುರವಾಗುತ್ತಿತ್ತು.* ೧೮೮೦ರಲ್ಲಿ ಧಾರವಾಡದಲ್ಲಿ ಮೂರ
ಕನ್ನಡ ಪತ್ರಿಕೆಗಳೂ, ಬೆಳಗಾಂವಿಯಲ್ಲಿ ಇನ್ನು ಮೂರೂ ಪ್ರಚುರವಾಗ

* ಬಾಗಲಕೋಟೆಯ ವೃತ್ತಪತ್ರ ಕರ್ತರ ಪರಿಷತ್ತಿನ ಸ್ವಾಗತ ಸಭಾಧ್ಯಕ್ಷರಾ
ಶ್ರೀ ಯಲಗುರ್ದ ವಾಸುದೇವ ಧಾರವಾಡ ವಕೀಲರು ತಮ್ಮ ಸ್ವಾರಸ್ಯವುಳ್ಳ ಪ್ರಾರಂ
ಭಾಷಣದಲ್ಲಿ ಈ ಸಂಗತಿಯನ್ನು ಹೇಳಿರುವರು.

ತ್ತಿದ್ದವು. ಮೈಸೂರಿನಲ್ಲಿ ಮೊದಲನೆಯ ಮುದ್ರಣ ಯಂತ್ರವು ೧೮೪೦ ರಲ್ಲಿ ಗ್ಯಾರೆಟ್ ಎಂಬ ಕ್ರೈಸ್ತ ಬೋಧಕನಿಂದ ಸ್ಥಾಪಿತವಾಯಿತು. ಮೈಸೂರು ಸರಕಾರದ "ಗೆಜೆಟ್" ೧೮೬೬ರಲ್ಲಿ ಉಪಕ್ರಮಿಸಿತು. "ಡೆಯಿಲೀ ಪೋಸ್ಟ್", "ಈವಿನಿಂಗ್ ಮೆಯಿಲ್" ಎಂಬ ಇಂಗ್ಲಿಷ್ ಪತ್ರಿಕೆಗಳೂ, ಹಿಂದೆ ಇದ್ದ "ಕರ್ಣಾಟಕ ಪ್ರಕಾಶಿಕೆ" ಮತ್ತು ಈಗಲೂ ಇರುವ "ಮೈಸೂರು ಸ್ಟಾರ್", "ವೃತ್ತಾಂತಪತ್ರಿಕೆ" ಎಂಬ ಕನ್ನಡ ಪತ್ರಿಕೆಗಳೂ ಮೈಸೂರು ರಾಜ್ಯದಲ್ಲಿ ಮೊದಮೊದಲು ಹುಟ್ಟಿದ ಪತ್ರಿಕೆಗಳ ಪೈಕಿ ಮುಖ್ಯವಾದುವು.

ಹೀಗೆ ಪತ್ರಿಕೆಗಳು ಇಂಡಿಯಾದೇಶದಲ್ಲಿ ಬಹುಕಾಲದ ಹಿಂದೆಯೇ ಪ್ರಾರಂಭವಾಗಿದ್ದರೂ, ಅವುಗಳಿಗೆ ಹೆಚ್ಚು ಪ್ರಾಶಸ್ತ್ಯವೂ ಪ್ರಾಚುರ್ಯವೂ ದೊರೆಯುತ್ತಿರುವುದು "ನ್ಯಾಷನಲ್ ಕಾಂಗ್ರೆಸ್" ಮಹಾಸಭೆಯು ಹುಟ್ಟಿದಂದಿನಿಂದ (೧೮೮೫) ಈಚೆಗೆ. ಸರಕಾರದ ಲೆಕ್ಕದ ಪ್ರಕಾರ ೧೯೨೩–೨೪ನೆಯ ಇಸ್ವಿಯಲ್ಲಿ ಇಂಡಿಯಾದೇಶದಲ್ಲೆಲ್ಲಾ ಒಟ್ಟು ೧,೩೬೩ ವರ್ತಮಾನಪತ್ರಿಕೆಗಳೂ, ೨,೮೮೮ ಇತರ ಬಗೆಯ ಕ್ಲುಪ್ತಕಾಲ ಪ್ರಕಟನೆಗಳೂ ಇದ್ದುವು. ಪತ್ರಿಕಾ ಪ್ರಚಾರದ ವಿಷಯವಾಗಿ ನಮ್ಮ ದೇಶವತ್ಸಲರಾದ ಸರ್ ಎಂ. ವಿಶ್ವೇಶ್ವರಯ್ಯನವರು ಅಪ್ಪಣೆ ಕೊಡಿಸಿರುವ ವಾಕ್ಯಗಳನ್ನುದಾಹರಿಸಿ ಈ ಪ್ರಕರಣವನ್ನು ಮುಗಿಸಬಹುದು :—

"೧೯೧೭–೧೮ರಲ್ಲಿ ವೃತ್ತಪತ್ರಿಕೆಗಳೂ ಇತರ ಕ್ಲುಪ್ತಕಾಲ ಪತ್ರಿಕೆಗಳೂ ಒಟ್ಟು ೩,೯೭೮ ಇಂಡಿಯಾದೇಶದಲ್ಲಿ ಪ್ರಕಾಶವಾಗುತ್ತಿದ್ದವು. ಈ ಸಂಖ್ಯೆಯನ್ನು ಹಂಚಿನೋಡಿದರೆ—

| | | | |
|---|---|---|---|
| ಇಂಡಿಯಾ ದೇಶದಲ್ಲಿ | ಹತ್ತುಲಕ್ಷ ಪ್ರಜೆಗೆ | ೧೨ | ಪತ್ರಿಕೆಗಳು |
| ಜಪಾನ್ ,, | ,, | ೫೦ | ,, |
| ಬ್ರಿಟನ್ (ಇಂಗ್ಲೆಂಡ್) ,, | ,, | ೧೯೦ | ,, |
| ಅಮೆರಿಕ (ಸಂಯುಕ್ತ ರಾಷ್ಟ್ರ) | ,, | ೨೨೫ | , |

—ಈ ರೀತಿ ಇದ್ದಂತೆ ಕಂಡುಬರುತ್ತದೆ.

"ಅಮೆರಿಕದ ಸಂಯುಕ್ತ ಸಂಸ್ಥಾನಗಳಂಥ ದೇಶಗಳಲ್ಲಿ ವೃತ್ತ ಪತ್ರಿಕೆಗಳ ಚಳವಳವು ಅತಿ ವಿಸ್ತಾರವಾಗಿದೆ. ಆ ರಾಜ್ಯದಲ್ಲಿ ಎಲ್ಲಾ ಬಗೆಯ ಪತ್ರಿಕೆಗಳೂ ಸೇರಿ, ೧೯೧೪ರಲ್ಲಿ, ೨೦ ಕೋಟಿ ೫೦ ಲಕ್ಷ ಪ್ರತಿಗಳು ಸಂಚರಿಸುತ್ತಿದ್ದುವೆಂದು ಗೊತ್ತಾಗಿದೆ. ಅನೇಕ ದಿನಪತ್ರಿಕೆಗಳು ದೊಡ್ಡ ಆಕಾರದ ೨೪ ಪುಟಗಳನ್ನೊಳಗೊಂಡಿರುತ್ತವೆ. ಭಾನುವಾರ ಹೊರಡುವ ಪತ್ರಿಕೆಗಳಲ್ಲಿ ೧೦೦ ಪುಟಗಳಿಗಿಂತ ಹೆಚ್ಚಾಗಿರುತ್ತವೆ.

"ಮುಂದುವರಿದಿರುವ ಎಲ್ಲ ದೇಶಗಳಲ್ಲಿಯೂ—ತತ್ರಾಪಿ ಅಮೆರಿಕ ಇಂಗ್ಲೆಂಡುಗಳಲ್ಲಿ—ವೃತ್ತಪತ್ರಿಕೆಯು ಒಂದು ದೊಡ್ಡ ವಿದ್ಯಾಪ್ರಸಾರಕ ಶಕ್ತಿಯಾಗಿದೆ. ಅಮೆರಿಕದ ಅನೇಕ ಭಾಗಗಳಲ್ಲಿ ರಾಜ್ಯಾಧಿಕಾರಿಗಳ ದುಷ್ಟ ಪದ್ಧತಿಗಳನ್ನು ನಿಲ್ಲಿಸಿ, ಅವರನ್ನು ಕರ್ತವ್ಯ ಕಾರ್ಯದಲ್ಲಿ ನಿಲ್ಲಿಸುವ ಕೆಲಸವನ್ನು ವೃತ್ತಪತ್ರಿಕೆಗಳು ಕೈಗೊಂಡಿವೆ.

"ನಮ್ಮ ಹಿಂದೂಸ್ಥಾನದಲ್ಲಿ ದೇಶೀಯ ಪತ್ರಿಕೆಗಳು ಬಡತನದಲ್ಲಿ ಬಾಳುತ್ತ, ಸರಕಾರದ ಆಗ್ರಹಕ್ಕೆ ಗುರಿಯಾಗಿವೆ. ಬ್ರಿಟಿಷ್ ಇಂಡಿಯದಲ್ಲಿಯೂ ದೇಶೀಯ ಸಂಸ್ಥಾನಗಳಲ್ಲಿಯೂ ಬಗೆ ಬಗೆಯ ಪ್ರೆಸ್ ಆಕ್ಟು(ವೃತ್ತಪತ್ರಿಕಾ ಶಾಸನ)ಗಳೂ ನಿರ್ಬಂಧಗಳೂ ಪತ್ರಿಕೆಗಳನ್ನು ನಾನಾ ವಿಧಗಳಲ್ಲಿ ತಡೆದಿಟ್ಟಿವೆ. ದೇಶದ ಯಾವ ಭಾಗದಲ್ಲಿಯೂ ಪತ್ರಿಕೆಗಳಿಗೆ ರಾಜಕೀಯ ಬಲವುಳ್ಳ ಜನವರ್ಗಗಳಿಂದ ಉತ್ಸಾಹಪೂರ್ವಕವಾದ ಒತ್ತಾಸೆ ದೊರೆಯುತ್ತಿಲ್ಲ."—*Reconstructing India*, P. 23.

ಇವು ೧೯೨೦ರಲ್ಲಿ ಬರೆದ ವಾಕ್ಯಗಳು. ಅಲ್ಲಿಂದೀಚೆಗೆ ಸ್ಥಿತಿ ಸ್ವಲ್ಪ ಮಟ್ಟಿಗೆ ಉತ್ತಮಪಟ್ಟಿದೆ. ಆದರೂ ಕರ್ಣಾಟಕದಲ್ಲಿ ಮಾತ್ರ ಈ ಉತ್ತಮತೆ ಅಷ್ಟಾಗಿ ತೋರಿಬಂದಿಲ್ಲ. ನಾವು ಈಗಲಾದರೂ ಎಚ್ಚೆತ್ತು ಉತ್ತಮತೆಯನ್ನು ಸಂಪಾದಿಸಬೇಕಾಗಿದೆ.

——

# ವೃತ್ತಪತ್ರಿಕೆಗಳು

## ಅವುಗಳಿಂದಾಗಬೇಕಾದ ಕರ್ತವ್ಯಗಳು, ಅವುಗಳಿಗೆ ಸಲ್ಲಬೇಕಾದ ಸಹಾಯಗಳು*

---

ಮಹಾಶಯರೆ,

ತಾವುಗಳು ನನ್ನ ವಿಷಯದಲ್ಲಿ ಎಷ್ಟು ಅತಿಶಯವಾದ ವಿಶ್ವಾಸವನ್ನು ತೋರಿಸಿದ್ದೀರಿ ಎಂಬುದು ನನ್ನ ಮನಸ್ಸಿಗೆ ಸ್ಪಷ್ಟವಾಗಿದೆ. ಈ ಸನ್ಮಾನವನ್ನು ಪಡೆಯಲು ನನಗೆ ಇರತಕ್ಕ ಅರ್ಹತೆಯೇನು ಎಂದು ನಾನು ವಿಚಾರಮಾಡಿಕೊಂಡಷ್ಟೂ ನನ್ನ ವಿನಯ ಕೃತಜ್ಞತೆಗಳಿಗೆ ಕಾರಣಗಳು ಹೆಚ್ಚಿ, ನನ್ನ ಬಾಯ ಧೋರಣೆಯು ಕಡಿಮೆಯಾಗುತ್ತದೆ. ಪತ್ರಿಕಾಕರ್ತರು ಜವಾಬ್ದಾರಿಯಿಲ್ಲದ ಜನರು ಎಂದು ಸಾಮಾನ್ಯವಾಗಿ ಇತರರು ಹೇಳುವುದುಂಟು. ಈಗ ತಾವುಗಳು ತಮ್ಮ ಅಧ್ಯಕ್ಷನನ್ನಾರಿಸಿಕೊಂಡಿರುವ ರೀತಿಯನ್ನು ನೋಡಿದರೆ ಆ ಅಪವಾದವು ಬಲಪಡಲಾರದೆ—ಎಂದು ನನಗೆ ಅನ್ನಿಸುತ್ತದೆ. ತಾವು ನನಗೆ ಕೊಟ್ಟಿರುವ ಪದವಿಯು ಬಹು ಗೌರವಕರವಾದುದು ಎಂದು ಎಲ್ಲರೂ ತಿಳಿದುಕೊಂಡಿರುತ್ತಾರೆ. ಆದರೆ ಸದ್ಯಃ ಅದರ ಜವಾಬ್ದಾರಿಯ ಭಾರವೊಂದೇ ನನ್ನ ಮನಸ್ಸಿಗೆ ತೋರುತ್ತಿದೆ. ಇದರ ಕಳವಳವು ತಮ್ಮಗಳ ಕೃಪೆ ಸಹಾಯಗಳಿಂದ ಕಡಿಮೆಯಾಗಬೇಕು. ಇದುವರೆಗೂ ತಾವು ಅಭಿಮಾನ ತೋರಿದ ತಪ್ಪಿಗಾಗಿ ಈಗ ತಾವು ತಾಳ್ಮೆ ತೋರಬೇಕಾಗಿದೆ.

---

* ೧೯೩೮ನೆಯ ಇಸ್ವಿ ಜುಲೈ ೩೧ನೆಯ ತಾರೀಖಿನ ದಿವಸ ಬಾಗಲಕೋಟೆಯಲ್ಲಿ ನಡೆದ ಅಖಿಲ ಕರ್ಣಾಟಕ ವೃತ್ತಪತ್ರಿಕಾಕರ್ತರ ಪ್ರಥಮ ಪರಿಷತ್ತಿನ ಅಧ್ಯಕ್ಷರಾಗಿ ಮಾಡಿದ ಉಪನ್ಯಾಸ.

## ಒಬ್ಬ ಆದರ್ಶ ಪುರುಷರು

ಈ ಸ್ಥಾನಕ್ಕೆ ತಾವು ಯಾರನ್ನು ಮೊದಲು ಚುನಾಯಿಸಿದ್ದಿರೋ ಆ ಪೂಜ್ಯ ಮಹನೀಯರು ಇಲ್ಲಿಗೆ ಬರಲು ಆಗಲಿಲ್ಲವೆಂಬ ವಿಷಯದಲ್ಲಿ ನನಗೆ ತಮ್ಮೆದುರ ಎರಡರಷ್ಟು ವಿಷಾದವಾಗಿದೆ. ಮೈಸೂರಿನ ಶ್ರೀಮಾನ್ ವೆಂಕಟಕೃಷ್ಣಯ್ಯನವರು ನಾನು ಹುಟ್ಟುವುದಕ್ಕೆ ಅನೇಕ ವರ್ಷಗಳ ಹಿಂದೆಯೇ ಕರ್ಣಾಟಕ ಪತ್ರಿಕಾ ಲೇಖಕರೆಂದು ಪ್ರಸಿದ್ಧರಾಗಿದ್ದರು. ಈಗ ಐವತ್ತು ವರ್ಷಗಳಿಂದ ಅವರು ಸಂತತವಾಗಿ, ಅವಿಚ್ಛಿನ್ನವಾಗಿ ಮಾಡಿಕೊಂಡು ಬಂದಿರುವ ದೇಶಸೇವೆ ಭಾಷಾಸೇವೆಗಳನ್ನು ನೆನೆದು ಕೊಂಡರೆ, ಅಗಸ್ತ್ಯ ಭೀಷ್ಮ ಮೊದಲಾದ ಪೂರ್ವ ಯುಗಗಳ ಮಹಾನು ಭಾವರುಗಳ ಕಥೆಯನ್ನು ಕೇಳಿದಾಗ ಮನಸ್ಸು ಹೇಗೆ ಪವಿತ್ರವಾಗಿ ಉನ್ನತಿಗೊಳ್ಳುವುದೋ ಹಾಗೆ ಸಂತೋಷಪಟ್ಟು ಉಬ್ಬುತ್ತದೆ. ಅಷ್ಟು ದೀರ್ಘಕಾಲ ವೃತ್ತಪತ್ರಿಕಾ ಕಾರ್ಯದಲ್ಲಿ ಏಕಪ್ರಕಾರವಾದ ಉತ್ಸಾಹ ವಿಶ್ವಾಸಗಳನ್ನಿಟ್ಟುಕೊಂಡು, ಸರ್ಕಾರದವರ ಕ್ರೋಧಾವೇಶಗಳಿಂದ ಭೀತಿಪಡದೆ, ಮಹಾಜನರ ಔದಾಸೀನ್ಯದಿಂದ ಬೇಸರಗೊಳ್ಳದೆ, ದೈವವು ತಂದೊಡ್ಡಿದ ದುಃಖಗಳ ಭಾರದಿಂದ ಕುಗ್ಗದೆ, ಇನ್ನೂ ಧನವನ್ನೂ, ಇನ್ನೂ ಆಯುಷ್ಯವನ್ನೂ, ಇನ್ನೂ ಆತ್ಮಶಕ್ತಿಯನ್ನೂ ಪತ್ರಿಕಾ ದೇವ ತೆಗೇ ಅರ್ಪಣೆಮಾಡಿ, ಆಕೆಯಿಂದಲೇ ದೇಶೀಯರಿಗೆ ಸದ್ಗತಿಯೆಂದು ನಂಬಿ ನಡೆಯುತ್ತಿರುವ ಧೀರರು ನಮಗೆಲ್ಲ ಆದರ್ಶ ಪುರುಷರಾಗಿರತಕ್ಕವ ರಲ್ಲವೆ? ಇಂಥ ಮಹಾನುಭಾವರು ಕರ್ಣಾಟಕದಲ್ಲಿಯೂ ಒಬ್ಬರಿರುವ ರೆಂಬ ಸಂಗತಿಯು ನಮಗೆಲ್ಲ ಉತ್ಸಾಹಕಾರಕವೂ ಕೀರ್ತಿಪ್ರದವೂ ಆಗಿದೆ. ಭಗವಂತನು ಈ ನಮ್ಮ ವೃದ್ಧ ಪಿತಾಮಹರನ್ನು ಚಿರಕಾಲ ಆರೋಗ್ಯ ಸೌಖ್ಯಗಳಲ್ಲಿಟ್ಟು ಕಾಪಾಡಿ ನಮ್ಮಲ್ಲಿ ಅನುಗ್ರಹ ತೋರಲಿ.

## ವೃತ್ತಪತ್ರಿಕಾಕರ್ತರ ಆತ್ಮಶೋಧನೆ

ದೇಶದ ಪತ್ರಿಕಾ ಲೇಖಕರು ಆಗಾಗ ಹೀಗೆ ಸಭೆ ನೆರೆದು ತಮ್ಮ ಉದ್ಯೋಗದ ಅಭ್ಯುದಯಕ್ಕೆ ಸಂಬಂಧಪಟ್ಟ ವಿಚಾರಗಳನ್ನು ಕುರಿತು ಚಿಂತಿಸುವುದು ಅತ್ಯಂತಾವಶ್ಯಕವೇ ಸರಿ. ಪತ್ರಿಕಾಕರ್ತರು ಸ್ವತಂತ್ರ

ಸ್ವತಂತ್ರರು, ಅವರಿಗೆ ಜವಾಬ್ದಾರಿಯ ಭಾರವೇನೂ ಇಲ್ಲ—ಎಂದು ಇತರರು ಹೇಳಿದರೆ ಹೇಳಲಿ. ಸರ್ವಜ್ಞತೆ ಸರ್ವಶಕ್ತತೆಗಳಿಗೂ ನಮಗೂ ಎಷ್ಟು ದೂರವಿದೆಯೆಂಬುದನ್ನು ನಾವೇ ಬಲ್ಲೆವು. ನಮ್ಮ ಉತ್ಸಾಹವು ದೊಡ್ಡದೇನೋ ನಿಜ; ಆದರೆ ನಮಗಿರತಕ್ಕ ಉಪಕರಣಗಳು ಬಹಳ ಚಿಕ್ಕವು. ನಮ್ಮ ಧೈರ್ಯವು ದೊಡ್ಡದು; ಆದರೆ ನಮಗಿರತಕ್ಕ ಪ್ರತಿಕೂಲಗಳು ಮಹತ್ತರವಾದುವು. ನಾವು ನಿಃಸ್ಪೃಹತೆಯ ಧೋರಣೆಯಿಂದ ಲೇಖಣಿಯನ್ನು ಝಳಪಿಸುವುದೇನೋ ನಿಜ; ಆದರೆ ಮಾನವ ಜಾತಿಗೆ ಸಹಜವಾದ ನ್ಯೂನತೆ ವಕ್ರತೆಗಳನ್ನು ನಾವು ತಪ್ಪಿಸಿಕೊಂಡಿರುವೆವೆಂದು ಮಾತ್ರ ನಾವೆಲ್ಲಿಯೂ ಹೇಳಿಕೊಳ್ಳುವುದಿಲ್ಲ. ಇತರ ಕಸಬುಗಳಲ್ಲಿಯ ನಮ್ಮ ಅಣ್ಣತಮ್ಮಂದಿರಲ್ಲಿರುವಂತೆಯೇ ನಮ್ಮಲ್ಲಿಯೂ ಕುಂದು ಕೊರತೆಗಳಿವೆ. ಅವರಿಗೆ ಇತರರ ಸಹಾನುಭೂತಿ ಬೇಕಾಗಿರುವಂತೆಯೇ ನಮಗೂ ಅದು ಬೇಕಾಗಿದೆ. ಅವರು ತಮ್ಮ ಸ್ಥಿತಿಯನ್ನು ಉತ್ತಮಪಡಿಸಿಕೊಳ್ಳಲು ಪ್ರಯತ್ನಿಸುವಂತೆಯೇ ನಾವೂ ಪ್ರಯತ್ನಿಸಬೇಕಾಗಿದೆ. ಸೃಷ್ಟಿಕರ್ತನು ವೃತ್ತಪತ್ರಿಕೋದ್ಯೋಗದವರಿಗೆ ಇತರರಿಗಿಲ್ಲದ ಸನ್ನದನ್ನೇನೂ ಕೊಟ್ಟಿಲ್ಲ. ನಾವು ದೈವಾಂಶಪುರುಷರಲ್ಲ; ಸಕಲ ಗುಣ ಪರಿಪೂರ್ಣತೆಯು ನಮಗೇನೂ ವರವಾಗಿ ಬಂದಿಲ್ಲ. ಇತರ ಮನುಷ್ಯರಂತೆಯೇ ನಾವೂ ಸ್ವವಿಷಯಕ ಪರೀಕ್ಷೆಯಿಂದಲೂ, ಸ್ವಗುಣದೋಷ ವಿಮರ್ಶೆಯಿಂದಲೂ, ಸ್ವಪ್ರಯತ್ನದಿಂದಲೂ, ಸ್ವಸಂಸ್ಕಾರದಿಂದಲೂ ಸದ್ಗತಿಯನ್ನು ಕಾಣಬೇಕಾಗಿದೆ.

## ಇಂಗ್ಲೆಂಡಿನ ಪತ್ರಕರ್ತ ಸಂಘ

ನಮಗಿಂತ ಲಕ್ಷ ಕ್ರೋಶ ಮುಂದೆ ಹೋಗಿರುವ ಬ್ರಿಟಿಷ ಪತ್ರಿಕಾ ಲೇಖಕರೇ ಈ ತತ್ತ್ವವನ್ನು ಲಕ್ಷ್ಯದಲ್ಲಿಟ್ಟು ನಡೆದುಕೊಳ್ಳುತ್ತಿದ್ದಾರೆ. ಅವರು 'ಇನ್‌ಸ್ಟಿಟ್ಯೂಟ್' ಎಂಬ ಸಂಘವನ್ನೇರ್ಪಡಿಸಿಕೊಂಡು, ಅದರ ಮೂಲಕ ವರ್ಷೇ ವರ್ಷೇ ಸಮ್ಮೇಲನಗಳನ್ನು ಕೂಡಿಸುತ್ತಿದ್ದಾರೆ. ಈ ಸಾರಿಯ ಸಮ್ಮೇಲನವು ಐರ್ಲೆಂಡ್ ರಾಷ್ಟ್ರದ ಡಬ್ಲಿನ್ ನಗರದಲ್ಲಿ ಈ (೧೯೨೮) ಆಗಸ್ಟ ತಿಂಗಳ ೨೫ನೆಯ ತಾರೀಖಿನಿಂದ ನಡೆಯುವು

ದಾಗಿದೆ. ಅದು ಎರಡು ವಾರ ನಡೆಯುವುದೆಂದೂ, ಅದಕ್ಕೆ ಆ ರಾಷ್ಟ್ರದ ಅಧ್ಯಕ್ಷರಾದ ಕಾಸ್‌ಗ್ರೇವ್ ಎಂಬವರೇ ಮೊದಲಾದ ದೇಶ ಪ್ರಮುಖ ರೆಲ್ಲರೂ ಸ್ವಾಗತವನ್ನೀಯುವರೆಂದೂ, ಅದರ ಸಾಂಗ ಸಮಾವೇಶಕ್ಕಾಗಿ ಅನೇಕ ಏರ್ಪಾಟುಗಳು ನಡೆಯುತ್ತಿವೆಯೆಂದೂ ಅಲ್ಲಿಂದ ಬಂದಿರುವ ಆಹ್ವಾನಪತ್ರದಿಂದ ಗೊತ್ತಾಗುತ್ತದೆ. ಆ ಸಂಘದಲ್ಲಿ ಬ್ರಿಟಿಷ್ ದೇಶಗಳ ಮುಖ್ಯ ಮುಖ್ಯ ಪತ್ರಿಕೆಗಳ ಲೇಖಕ ಸಂಪಾದಕರುಗಳೆಲ್ಲರೂ ಸದಸ್ಯ ರಾಗಿದ್ದಾರೆ. ಸದಸ್ಯತ್ವವು ಕೆಲವು ಕಟ್ಟುನಿಟ್ಟಾದ ನಿಬಂಧನೆಗಳಿಗೆ ಒಳಪಟ್ಟಿದೆ. ಆದರೂ ಸದಸ್ಯರ ಸಂಖ್ಯೆಯು ಎರಡು ಸಾವಿರಕ್ಕೆ ಮೇಲ್ಪಟ್ಟಿದೆ. ಆ ಸಂಘವು ಪತ್ರಿಕೋದ್ಯೋಗದವರ ಸೌಖ್ಯ ಸೌಕರ್ಯ ಗಳಿಗಾಗಿ ಅನೇಕ ಏರ್ಪಾಟುಗಳನ್ನು ಕೈಕೊಂಡಿದೆ. ಪತ್ರಿಕಾ ಲೇಖಕ ರಲ್ಲಿ ಅಂಗಹೀನರೂ ದುರ್ಬಲರೂ ದೀನರೂ ಆದವರಿಗೆ ಆಪತ್ಕಾಲದಲ್ಲಿ ಧನಸಹಾಯ ಕೊಡಲು ಒಂದು ನಿಧಿ; ಕುಟುಂಬವನ್ನು ರಿಕ್ತದಶೆಯಲ್ಲಿ ಬಿಟ್ಟು ಸತ್ತ ಪತ್ರಿಕಾ ಲೇಖಕರ ಮಕ್ಕಳಿಗೆ ಸಹಾಯವನ್ನೊದಗಿಸಲು ಮತ್ತೊಂದು ನಿಧಿ; ಬಳಲಿ ಬೇಸತ್ತಿರುವ ಪತ್ರಿಕಾ ಲೇಖಕರು ವಿರಾಮ ಮಾಡಿಕೊಂಡು ಹೋಗಿ ಆರೋಗ್ಯ ದೇಹ ಸೌಖ್ಯಗಳನ್ನು ಸಂಪಾದಿಸಿ ಕೊಳ್ಳಲು "ಓಕ್ ಹಿಲ್" ಎಂಬ ಬಳಿ ಒಂದು ಮನೋಹರವಾದ ವಿಶ್ರಾಂತಿ ಮಂದಿರ; ತಕ್ಕ ಪತ್ರಿಕೋದ್ಯೋಗವನ್ನು ಹುಡುಕುತ್ತಿರುವ ಲೇಖಕರಿಗೆ ತಕ್ಕ ಪತ್ರಿಕಾಧಿಪತಿಗಳನ್ನೂ, ಲೇಖಕರನ್ನು ಹುಡುಕುತ್ತ ಲಿರುವ ಅಧಿಪತಿಗಳಿಗೆ ತಕ್ಕ ಪತ್ರಿಕಾ ಲೇಖಕರನ್ನೂ ಒದಗಿಸಿಕೊಡಲು ಒಂದು ಉಪಸಂಸ್ಥೆ; ಪತ್ರಿಕೋದ್ಯೋಗಿಗಳು ತಮ್ಮ ಕಸಬಿಗೆ ಸಂಬಂಧ ಪಟ್ಟ ವಿಷಯಗಳನ್ನು ಚರ್ಚಿಸಲು ಒಂದು ಪ್ರತ್ಯೇಕ ಮಾಸಪತ್ರಿಕೆ— ಇವೆಲ್ಲವನ್ನೂ ಆ ಸಂಘವು ನಡೆಸುತ್ತಿದೆ. ಅದರ ಸಭೆ ಸಮಾರಂಭಗಳಿಗೆ ಇಂಗ್ಲೆಂಡಿನ ಪ್ರಥಮ ಪ್ರಧಾನಿಯೇ ಮೊದಲಾಗಿ ಎಲ್ಲ ರಾಜಕೀಯ ಪ್ರಮುಖರೂ ಆದರದಿಂದ ಬಂದು, ವೃತ್ತಪತ್ರಿಕೋದ್ಯೋಗಿಗಳ ವಿಷಯ ದಲ್ಲಿ ಗೌರವವನ್ನು ವ್ಯಕ್ತಪಡಿಸಿ, ಸಂಘಕ್ಕೆ ಉತ್ತೇಜನವನ್ನು ಕೊಡು ತ್ತಿದ್ದಾರೆ. ಬ್ರಿಟಿಷ್ ಪತ್ರಿಕಾಕರ್ತರುಗಳೇ ತಮ್ಮ ಕಸಬಿನ ಮೇಲ್ಮೆ ಗಾಗಿ ಹೀಗೆ ಶ್ರಮಪಡಬೇಕಾಗಿರುವಲ್ಲಿ, ನಮ್ಮ ದೇಶದ ಪತ್ರಿಕಾ

ಕರ್ತರುಗಳು ವಿಶೇಷ ಶ್ರಮವನ್ನು ಪಟ್ಟ ಹೊರತು ಅವರ ಉದ್ಯೋಗವು ಉಚ್ಚಸ್ಥಾನಕ್ಕೆ ಹೇಗೆ ಬಂದೀತು?

## ಪತ್ರಿಕಾ ಪ್ರಭಾವ

ನಮ್ಮ ದೇಶದಲ್ಲಿ—ಎಂದರೆ ಒಟ್ಟು ಹಿಂದೂಸ್ಥಾನದಲ್ಲಿ—ವೃತ್ತಪತ್ರಿಕೆಗಳು ಇದುವರೆಗೂ ಮಾಡಿರುವ ಕೆಲಸವನ್ನು ನೋಡಿದರೆ ನಾವೇನೂ ತಲೆ ತಗ್ಗಿಸುವಹಾಗಿಲ್ಲ. ಜನಪದ ಗುರುಪಂಕ್ತಿಯ ಅಗ್ರಭಾಗದಲ್ಲಿ ವಿರಾಜಿಸುತ್ತಿರುವ ದಾದಾಭಾಯಿ ನವರೋಜಿಯವರಿಂದ ಗಾಂಧೀ ಮಹಾತ್ಮರವರೆಗೂ ನಮ್ಮ ಎಲ್ಲ ದೇಶಭಕ್ತರೂ ಪತ್ರಿಕಾ ಲೇಖಕರು. ಈಗಿನ ಪ್ರಜಾ ಜಾಗೃತಿಯೂ ಸ್ವರಾಜ್ಯ ಸಂಪಾದನೆಯ ಚಳವಳವೂ ಬಹುಮಟ್ಟಿಗೆ ವೃತ್ತಪತ್ರಿಕಾ ಕಾರ್ಯವೇ ಎಂದು ನಾವು ಧಾರಾಳವಾಗಿ ಹೇಳಿಕೊಳ್ಳಬಹುದು. ಏಕೆಂದರೆ, ನಮ್ಮ ದೇಶದಲ್ಲಿ ಪ್ರಜಾ ಸಾಮಾನ್ಯವನ್ನು ಮುಟ್ಟಬಲ್ಲುದು ಬಾಯಮಾತಲ್ಲ, ಬರೆದ ಮಾತು. ಸಭೆಗಳಲ್ಲಿ ಉಪನ್ಯಾಸಗಳನ್ನು ಕೇಳಬಲ್ಲವರು ಸ್ವಲ್ಪ ಮಂದಿ; ಪತ್ರಿಕೆಗಳ ಲೇಖನಗಳನ್ನು ಓದಬಲ್ಲವರು ಬಹು ಮಂದಿ. ಸಭೆ ಸಂಭಾಷಣೆಗಳಾಗುವುದು ದೊಡ್ಡ ದೊಡ್ಡ ಊರು ಪಟ್ಟಣಗಳಲ್ಲಿ; ಪತ್ರಿಕೆಗಳ ಪ್ರಚಾರವಾಗುವುದು ಹಳ್ಳಿಗಳಲ್ಲಿ ಕೂಡ. ಬಹು ವಿಸ್ತಾರವಾಗಿ ಬಹುವಿಧವಾಗಿರುವ ಈ ದೇಶದಲ್ಲಿ ಉಪನ್ಯಾಸಕನ ಧ್ವನಿ ಎಲ್ಲ ಕಡೆಯೂ ವ್ಯಾಪಿಸಲಾರದು, ಲೇಖಕನ ಅಕ್ಷರವೆಲ್ಲಿಬೇಕಾದರೂ ಹೋಗಬಲ್ಲುದು. ಧ್ವನಿಯ ಅನುಭವವಾದರೋ ವರ್ಷಕ್ಕೊಂದೆರಡಾವರ್ತಿ ಮಾತ್ರ ಆಗುವುದು; ಅಕ್ಷರ ದರ್ಶನವು ಪ್ರತಿವಾರವೂ, ಪ್ರತಿದಿನವೂ ಆಗುತ್ತಲೇ ಇರುವುದು. ಹೀಗಿರುವುದರಿಂದ, ಜನತೆಯ ಮನಸ್ಸನ್ನು ಕಿವಿಯ ಮೂಲಕ ಹೊಗುವವರಿಗಿಂತ ಕಣ್ಣಿನ ಮೂಲಕ ಹೊಗುವವರ ವ್ಯಾಪನೆ ಹೆಚ್ಚು. ಒಂದು ಉಪನ್ಯಾಸವನ್ನು ಕೇಳುವವರು ಒಂದು ಸಾವಿರವಾದರೆ ಒಂದು ಪತ್ರಿಕೆಯನ್ನೋದುವವರು ಹತ್ತು ಸಾವಿರ. ಇಷ್ಟು ಮಾತ್ರವೇ ಅಲ್ಲ. ಉಪನ್ಯಾಸಗಳಿಗೆ ಬೇಕಾದ ಸಾಮಗ್ರಿಯನ್ನು ಒದಗಿಸುವ ಕೆಲಸವೂ, ಉಪನ್ಯಾಸಗಳನ್ನು ಅರ್ಥಮಾಡಿಕೊಳ್ಳಲು ಜನರಿಗೆ ಇರಬೇಕಾದ ಇತರ

ಬಗೆಯ ತಿಳಿವಳಿಕೆಯನ್ನು ಉಂಟುಮಾಡಿಕೊಡುವ ಕೆಲಸವೂ, ಉಪನ್ಯಾಸ ಕೇಳಲು ಅನುಕೂಲವಿಲ್ಲದ ಸಾವಿರಾರು ಮಂದಿಗೆ ಅದರ ಅಚ್ಚಿನ ಪ್ರತಿಗಳನ್ನು ಹಂಚುವ ಕೆಲಸವೂ ಸಹ ವೃತ್ತಪತ್ರಿಕೆಗಳಿಗೇ ಸೇರಿರುತ್ತವೆ. ಹೀಗೆ ನೋಡಿದರೆ, ನಮ್ಮ ದೇಶದ ಸಾರ್ವಜನಿಕ ವ್ಯಾಪಾರಗಳಲ್ಲಿ ಉಪನ್ಯಾಸ ವೇದಿಕೆಗಿಂತ ವೃತ್ತಾಂತ ಪತ್ರಿಕೆಯೇ ಹೆಚ್ಚು ಪ್ರಾಬಲ್ಯವುಳ್ಳುದೂ ಪರಿಣಾಮಕಾರಕವೂ ಆಗಿರುವುದೆಂದು ನಿರ್ಧಿತಿಯಿಂದ ಹೇಳಬಹುದು. ಅಭಿನವ ಭರತಖಂಡದ ಜನಜಾಗೃತಿಯ ಚರಿತ್ರೆಯನ್ನು ಬರೆಯುವವರು ಬಂಗಾಳದ ಕೃಷ್ಣದಾಸ ಪಾಲ್, ಸುರೇಂದ್ರನಾಥ ಬಾನರ್ಜಿ—ಇವರ, ಬೊಂಬಾಯಿಯ ಆಗರ್ಕರ್, ಲೋಕಮಾನ್ಯ ತಿಲಕ್—ಇವರ, ಮತ್ತು ಮದರಾಸಿನ ಸುಬ್ರಹ್ಮಣ್ಯಯ್ಯರ್, ಕಸ್ತೂರಿ ರಂಗಯ್ಯಂಗಾರ್—ಈ ಪತ್ರಿಕಾ ಚಾಲಕರ ಹೆಸರುಗಳನ್ನು ಸ್ವರ್ಣಾಕ್ಷರಗಳಲ್ಲಿ ಚಿತ್ರಿಸುವರೆಂಬುದಕ್ಕೆ ಸಂದೇಹವಿರದು.

## ಕರ್ಣಾಟಕದ ಪತ್ರಿಕೆಗಳು

ಕನ್ನಡ ನಾಡಿನಲ್ಲಿಯೂ ಸಹ ವೃತ್ತಪತ್ರಿಕಾ ಪ್ರಚಾರವು ಬಹುಕಾಲದಿಂದ ನಡೆದುಕೊಂಡು ಬಂದಿದೆ. ನನಗೆ ತಿಳಿದಮಟ್ಟಿಗೆ ಮೈಸೂರು ಪ್ರಾಂತದಲ್ಲಿ ಮೊದಲು ಹುಟ್ಟಿದ ಕನ್ನಡ ಪತ್ರಿಕೆ "ಕರ್ಣಾಟಕ ಪ್ರಕಾಶಿಕೆ" ಎಂಬುದು. ಅದು ಈಗ ಬದುಕಿದ್ದಿದ್ದರೆ ಐವತ್ತುನಾಲ್ಕು ವರ್ಷದ್ದಾಗಿರುತ್ತಿತ್ತು. ಅದರ ಲೇಖನಗಳು ಬಹುವಿಷಯ ಪೂಜಿತಗಳಾಗಿ ಪ್ರೌಢವೂ ಗಂಭೀರವೂ ಆದ ಶೈಲಿಯುಳ್ಳಿರುತ್ತಿದ್ದುವು. ಮೈಸೂರು ರಾಜ್ಯದ ಪುನರುಜ್ಜೀವನ ಕಾರ್ಯದಲ್ಲಿ ಆ ಪತ್ರಿಕೆಯೂ ಬಹುಮಟ್ಟಿಗೆ ಸಹಾಯ ಮಾಡಿತು. ಅದರಿಂದೀಚೆಗೆ "ಹಿತಬೋಧಿನಿ," "ವೃತ್ತಾಂತ ಚಿಂತಾಮಣಿ," "ನಡೆಗನ್ನಡಿ" ಮೊದಲಾದ ಅನೇಕ ಪತ್ರಿಕೆಗಳು ಪ್ರಜಾಬೋಧೆಗಾಗಿಯೂ ಪ್ರಜಾಸೌಕರ್ಯಕ್ಕಾಗಿಯೂ ಬಹುಕಾಲ ದುಡಿದು, ಬಗೆ ಬಗೆಯ ಕಾರಣಗಳಿಂದ ಕೊನೆಗಂಡವು. ಅಷ್ಟು ಹಿಂದಿನಿಂದ ನಡೆದುಕೊಂಡು ಬಂದು ಈಗಲೂ ಪ್ರವರ್ಧಮಾನವಾಗಿರುವ ಪತ್ರಿಕೆಗಳು ಮೈಸೂರಿನಲ್ಲಿ ಎರಡಿವೆ:—(೧) "ಮೈಸೂರು

ಸ್ಟಾರ್," (೨) "ವೃತ್ತಾಂತ ಪತ್ರಿಕೆ." ಹೋದ ಪತ್ರಿಕೆಗಳಿಗೆ ಪ್ರತಿಯಾಗಿ ಹೊಸ ಪತ್ರಿಕೆಗಳು ಅನೇಕ ಹುಟ್ಟಿ ಈಗ ಉತ್ಸಾಹದಿಂದಲೂ ಧೈರ್ಯದಿಂದಲೂ ಕೆಲಸ ಮಾಡುತ್ತಲಿವೆ. ಸಂಸ್ಥಾನದೊಳಗೆ ಪತ್ರಿಕೋದ್ಯೋಗವನ್ನು ಕೈಗೊಳ್ಳುವುದರಲ್ಲಿ ಶ್ರದ್ಧಾಸಕ್ತಿಗಳುಳ್ಳವರು ಇಷ್ಟು ಮಂದಿ ಇರುವರೆಂಬುದು ಎಲ್ಲರಿಗೂ ಸಂತೋಷದ ಸಂಗತಿ.

ಮಂಗಳೂರು, ಧಾರವಾಡ ಪ್ರಾಂತಗಳಲ್ಲಿಯೂ ಪತ್ರಿಕಾ ಪ್ರಾಚುರ್ಯವು ಅನೇಕ ವರ್ಷಗಳಿಂದ ನಡೆಯುತ್ತಿದೆ. ಈ ಪ್ರಾಂತಗಳ ಪತ್ರಿಕೆಗಳ ಚರಿತ್ರೆಯು ನನಗೆ ವಿಶೇಷವಾಗಿ ತಿಳಿಯದಿದ್ದರೂ, ಅವುಗಳ ಕೀರ್ತಿಯ ಪರಿಚಯವು ಚೆನ್ನಾಗಿ ಉಂಟು. ಉಜ್ಜ್ವಲವಾದ ಭಾಷಾಭಿಮಾನ, ಪ್ರಜಾ ಜನರನ್ನು ಮುಂದಕ್ಕೆ ತರಬೇಕೆಂಬ ತೀವ್ರವಾದ ಆಶೆ, ಸ್ವರಾಜ್ಯ ಸಮಾರಂಭದಲ್ಲಿ ದೃಢವಾದ ಆಸ್ಥೆ—ಇವು ಬ್ರಿಟಿಷ್ ಕರ್ಣಾಟಕದಲ್ಲಿಯ ಪತ್ರಿಕೆಗಳ ಜೀವಕಳೆಯಾಗಿವೆಯೆಂದು ನಾನು ಮನಃಪೂರ್ತಿಯಾಗಿ ಹೇಳಬಲ್ಲೆ. ನಮ್ಮ ಭಾಷಾ ಬಂಧುಗಳಾದ ಕೊಡಗರೂ ಸಹ ಈಚೆಗೆ ಕನ್ನಡ ಪತ್ರಿಕೆಗಳೆರಡು ಮೂರನ್ನು ಹೂಡಿ ಬೆಳೆಯಿಸುತ್ತಿರುವುದು ನಮ್ಮ ಕೃತಜ್ಞತೆಗೆ ಕಾರಣವಾಗಬೇಕಾದ ಸಂಗತಿ.

ಹೀಗೆ ಪತ್ರಿಕೆಗಳ ಸಂಖ್ಯೆಯು ಕರ್ಣಾಟಕದಲ್ಲಿ ತಕ್ಕಮಟ್ಟಿಗೆ ಇದ್ದರೂ, ಅವುಗಳ ಸ್ಥಿತಿಯು ಒಟ್ಟಿನಮೇಲೆ ಅಷ್ಟೇನೂ ಸಂತೃಪ್ತಿಯನ್ನುಂಟುಮಾಡುವ ಹಾಗಿಲ್ಲ. ಈ ಬೆಳಿಗ್ಗೆ ನಾವು ನೋಡಿದ ಪತ್ರಿಕೆಗಳ ಪ್ರದರ್ಶನದಿಂದ ನಮ್ಮ ಪತ್ರಿಕಾ ಪ್ರಪಂಚದಲ್ಲಿ ಜನನ ಮರಣಗಳು ಎಷ್ಟೆಷ್ಟು ಬೇಗ ಆಗುತ್ತಿವೆ ಎಂಬುದು ಮನಸ್ಸು ಮುಟ್ಟುವಹಾಗೆ ತೋರಿಬಂದಿದೆ. ಈಗಲೂ ಜೀವಿಸಿಕೊಂಡು ಹೋರಾಡುತ್ತಿರುವ ಅನೇಕ ಪತ್ರಿಕೆಗಳಿಗೆ ಅವುಗಳ ಚಾಲಕರ ಉತ್ಸಾಹವೊಂದೇ ಪ್ರಾಣಾಧಾರವಾಗಿದೆ. ಅವುಗಳ ರೂಪದಿಂದಲೇ ಅವುಗಳ ಬಡತನವು ಸ್ಪಷ್ಟವಾಗುತ್ತದೆ. ಈ ಬಡತನದ ಪರಿಣಾಮವು ಅವುಗಳ ಚಾಲಕರನ್ನು ಮಾತ್ರವೇ ಆಶ್ರಯಿಸತಕ್ಕುದಾದರೆ ಚಿಂತೆಗೆ ಕಾರಣವಿರದು. "ಪತ್ರಿಕೆ ಹೊರಡಿಸುವವರು ಅಧಿಕಪ್ರಸಂಗಕ್ಕೆ ಕೈಹಾಕಿದರು; ಅದಕ್ಕೆ ತಕ್ಕ

ಶಾಸ್ತಿ ಅವರಿಗೆ ಆಗುತ್ತಿದೆ''—ಎಂದು ಹೇಳಿಬಿಡಬಹುದು. ಆದರೆ ಪತ್ರಿಕೆಗಳ ಬಡತನದ ಪರಿಣಾಮವು ದೇಶಕ್ಕೆಲ್ಲ ಅನ್ವಯಿಸತಕ್ಕುದು. ಪತ್ರಚಾಲಕನ ದ್ರವ್ಯ ದಾರಿದ್ರ್ಯವು ವಾಚಕರ ಪಾಲಿಗೆ ಸೇವಾ ದಾರಿದ್ರ್ಯವಾಗಿ ಪರಿಣಮಿಸುವುದು. ಈಗ, ನಮ್ಮ ಜನರಿಗೆ ಅವರ ಸುಖ ಸಂಪತ್ತುಗಳ ಬಗ್ಗೆ ವೃತ್ತಪತ್ರಿಕೆಗಳ ಮುಖ್ಯತೆ ಎಂಥದೆಂಬುದನ್ನು ಚೆನ್ನಾಗಿ ಮಂಡಟ್ಟುಮಾಡಿಕೊಡಬೇಕಾದ ಕಾಲ ಬಂದಿದೆ.

## ಪತ್ರಿಕೆಯೇ ಪ್ರಜೆಯ ಮುಖ

ಇನ್ನು ಮುಂದೆ ನಮ್ಮ ದೇಶವು ಕ್ರಮ ಕ್ರಮವಾಗಿ ಪ್ರಜಾಜನರ ಆಧಿಪತ್ಯಕ್ಕೆ ಒಳಪಡುವುದು ಖಂಡಿತ. ಸೈಮನ್ ಕಮಿಷನ್ನಿನವರು ಯಾವ ರೀತಿಯಾದರೂ ನಿರ್ಣಯ ಮಾಡಲಿ; ಬರ್ಕನ್‌ಹೆಡ್ ಪ್ರಭುವು ಯಾವ ತಂತ್ರವನ್ನಾದರೂ ಹಿಡಿಯಲಿ; ಪ್ರಜಾ ಪ್ರಭುತ್ವವು ಈ ದೇಶಕ್ಕೆ, ಇಂದಲ್ಲದಿದ್ದರೆ ನಾಳೆಯಾದರೂ ತಪ್ಪದು. ಹೀಗೆ ಪ್ರಜಾಸತ್ತೆಯು ಬಂದು ನಿಲ್ಲಲು ಮಾರ್ಗವನ್ನು ವೃತ್ತಪತ್ರಿಕೆಗಳೇ ನಿರ್ಮಾಣ ಮಾಡಿವೆ. ಆದರಂತೆ ಪ್ರಜೆಗಳು ತಾವೇ ರಾಜ್ಯಭಾರವನ್ನು ನಿರ್ವಹಿಸಬೇಕಾಗಿ ಬಂದಾಗ ಅವರಿಗೆ ಆ ಕಾರ್ಯದಲ್ಲಿ ಅತ್ಯಾವಶ್ಯಕವಾಗಿ ಇರಬೇಕಾದ ಆಯುಧವು ವೃತ್ತಪತ್ರಿಕೆ. ಅದುವರೆಗೂ ಅವರಿಗೆ ಸ್ವತಂತ್ರ ರಾಜ್ಯಭಾರ ಯೋಗ್ಯತೆಯನ್ನು ಉಂಟುಮಾಡಿಕೊಡಬಲ್ಲ ಸಾಧನವೂ ವೃತ್ತಪತ್ರಿಕೆಯೇ. ವೃತ್ತಪತ್ರಿಕೆಯೇ ಪ್ರಜೆಯ ಕಣ್ಣೆಂದೂ, ಕಿವಿಯೆಂದೂ, ಬಾಯೂ ಕೂಡ ಅದೇ ಎಂದೂ ಹೇಳಿದರೆ ಉತ್ಪ್ರೇಕ್ಷೆಯಾಗಲಾರದು.

## ನಾರದ ಸ್ಮರಣೆ

ಪೂರ್ವ ಯುಗಗಳಲ್ಲಿ ದೇವತಾ ಪ್ರಪಂಚದಲ್ಲಿಯೂ ದೇವಾಂಶ ಪುರುಷ ಪ್ರಪಂಚದಲ್ಲಿಯೂ ನಾರದರು ಈಗಿನ ಪತ್ರಿಕಾಕರ್ತರ ಕೆಲಸವನ್ನು ಮಾಡುತ್ತಿದ್ದರು. ಲೋಕವಾರ್ತೆಯನ್ನು ಸಾರುವುದೂ, ದುಷ್ಟ ಚೇಷ್ಟೆಯನ್ನು ಗಮನಕ್ಕೆ ತರುವುದೂ, ಹಿತವನ್ನು ಸೂಚಿಸುವುದೂ ನಾರದರು ಮಾಡುತ್ತಿದ್ದ ಕೆಲಸಗಳು. ಹಿರಣ್ಯಕಶಿಪುವಿಗೆ

ಅಪಾಯವನ್ನು ಸೂಚಿಸಿದವರೂ, ಇಂದ್ರನಿಗೆ ಎಚ್ಚರಿಕೆ ಹೇಳಿದವರೂ, ಸತ್ಯಭಾಮೆಗೆ ಆಕೆಯ ಹಕ್ಕನ್ನು ತಿಳಿಸಿಕೊಟ್ಟವರೂ, ಧ್ರುವನಿಗೆ ಹಿತೋಪದೇಶ ಮಾಡಿದವರೂ, ಅರ್ಜುನನಿಗೆ ಗರ್ವಭಂಗ ಮಾಡಿಸಿದವರೂ, ಮಹಾವಿಷ್ಣುವಿಗೆ ಲೋಕಗಳ ಸ್ಥಿತಿಯನ್ನು ಅರಿಕೆ ಮಾಡುತ್ತಿದ್ದವರೂ, ಸಕಲ ಜೀವಿಗಳಿಗೂ ದೈವಲೀಲೆಯನ್ನು ಕೀರ್ತಿಸಿ ಜ್ಞಾನಾನಂದಗಳನ್ನು ನೀಡುತ್ತಿದ್ದವರೂ—ನಾರದರೇ ಅಲ್ಲವೆ? ನಮ್ಮ ಯುಗದಲ್ಲಿಯೂ ಆ ಬಗೆಯ ಕರ್ತವ್ಯಗಳು ನೆರವೇರಬೇಕಾಗಿವೆ. ಆದರೆ ಈಗ ನಾರದರಿಲ್ಲ; ಪತ್ರಿಕಾ ಲೇಖಕರು ಅವರ ಸ್ಥಾನದಲ್ಲಿ ನಿಲ್ಲಬೇಕಾಗಿದೆ. ಒಂದು ವೇಳೆ ನಾರದರೇನಾದರೂ ಈಗ ನಮ್ಮ ಪ್ರಪಂಚಕ್ಕೆ ಬಂದರೆ, ಅವರನ್ನು ಹಿಂದಿನಂತೆ ಲೋಕವು ಪುರಸ್ಕರಿಸುವುದೋ—ಎಂಬ ವಿಷಯದಲ್ಲಿ ಸಂಶಯಪಡುವುದಕ್ಕೂ ಕಾರಣವುಂಟು. ಏಕೆಂದರೆ, ಈಗ ಭೂಲೋಕದಲ್ಲಿ ಸ್ವತಂತ್ರ ವಿಚಾರ ಬುದ್ಧಿ ಹೆಚ್ಚುತ್ತಿದೆ. "ನಾರದರ ವೀಣಾನಾದಕ್ಕೆ ಯಾರೂ ಮರುಳಾಗಿ ಅವರ ಮಾತಿಗೆ 'ತಥಾಸ್ತು' ಎನ್ನಬಾರದು"—ಎಂದು ಎಚ್ಚರ ಹೇಳುವಷ್ಟು ಸ್ವತಂತ್ರರೂ ಧೈರ್ಯಶಾಲಿಗಳೂ ನಮ್ಮ ಪತ್ರಿಕಾ ಭ್ರಾತೃಗಳಲ್ಲಿಯೇ ಅನೇಕರಿದ್ದಾರು.

## ಪತ್ರಿಕೆಯೂ ಒಂದು ರಾಜ್ಯಾಂಗ

ಪ್ರಜಾ ರಾಜ್ಯಕ್ಕೆ ಸಾರ್ವಜನಿಕ ವಿಚಾರ ಪ್ರಕಟನೆಯೂ ಬಹುಮುಖವಾದ ಚರ್ಚೆಯೂ ಉಚ್ಛ್ವಾಸ ನಿಃಶ್ವಾಸಗಳಂತೆ. ಪೂರ್ವಕಾಲದಲ್ಲಿ ನಮ್ಮವರು ರಾಜ್ಯವು ಸಪ್ತಾಂಗ ಸಮನ್ವಿತವೆಂದೂ ಅದರಲ್ಲಿ ರಾಜನು ಪ್ರಧಾನಾಂಗವೆಂದೂ ಎಣಿಸಿದ್ದರು. ಈಗ ಪ್ರಜೆಯು ಪ್ರಧಾನಾಂಗವಾಗುವ ಕಾಲ ಬರುತ್ತಿದೆ. ಪ್ರಜೆಯಾದರೋ, ವರ್ತಮಾನ ಪತ್ರಿಕೆಯನ್ನು ಬಿಟ್ಟರೆ ಕಿವುಡುತನ ಕುರುಡುತನ ಮೂಕತನಗಳು ಮೂರೂ ಸೇರಿದವನಂತೆ ಆಗುವುದು. ಇಂಗ್ಲೆಂಡಿನಲ್ಲಿ ಪತ್ರಿಕಾ ವರ್ಗವನ್ನು ರಾಜ್ಯದ ನಾಲ್ಕನೆಯ ಅಧಿಷ್ಠಾನ (ಫೋರ್ತ್ ಎಸ್ಟೇಟ್) ಎಂದು ಕರೆಯುವುದುಂಟು. ಪತ್ರಿಕೆಗಳ ಪ್ರತಿಭೆ ಪ್ರಭಾವಗಳು ಎಷ್ಟೆಷ್ಟು ಹೆಚ್ಚಾಗಿದ್ದರೆ ಜನರ ರಾಜಕೀಯ ಯೋಗ್ಯತೆಯು ಅಷ್ಟಷ್ಟು ಹೆಚ್ಚಾಗಿ

ರುವುದು. ದೇಶದ ದಿನಂಪ್ರತಿ ಜೀವನವು ಪತ್ರಿಕೆಗಳಲ್ಲಿ ಪ್ರತಿಬಿಂಬಿಸು ತ್ತದೆ. ಆದ್ದರಿಂದ ಜನರ ಯೋಗ್ಯತೆ ಸಾಮರ್ಥ್ಯಗಳನ್ನು ಕಂಡುಕೊಳ್ಳ ಬೇಕಾದರೆ ಅವರಿಗಾಗಿ ಹೊರಡುವ ಪತ್ರಿಕೆಗಳನ್ನು ನೋಡಿದರೆ ಸಾಕು. ಈಗ ಹೀಗೆ ಪರೀಕ್ಷಿಸಿನೋಡಿದರೆ ನಮ್ಮ ಜನರ ಪ್ರಕೃತ ಸ್ಥಿತಿಯು ಕೀರ್ತಿಕರವಾಗಿದೆಯೆಂದು ಯಾರೂ ಹೇಳಲಾಗುವುದಿಲ್ಲ.

## ಮಹಾಜನರ ಔದಾಸೀನ್ಯ

ಒಟ್ಟಿನಮೇಲೆ, ಇಂಡಿಯಾದೇಶದಲ್ಲಿ ವರ್ತಮಾನ ಪತ್ರಿಕೆಗಳಿಗೆ ಇರುವ ಪ್ರಾಶಸ್ತ್ಯ ಸಂಪತ್ತುಗಳು ಇಂಗ್ಲೆಂಡ್, ಅಮೆರಿಕ, ಫ್ರಾನ್ಸ್, ಜರ್ಮನಿ ಮುಂತಾದ ದೇಶಗಳಲ್ಲಿಯೂ, ಅವಕ್ಕಿಂತ ನಮಗೆ ಸಮೀಪ ವಾದ ಜಪಾನ್ ದೇಶದಲ್ಲಿಯೂ ಸಹ, ಆಯಾ ದೇಶಗಳ ಪತ್ರಿಕೆಗಳಿಗೆ ಇರುವಷ್ಟು ಮಟ್ಟಿಗೆ ಇಲ್ಲ. ಇಂಗ್ಲಿಷ್ ಭಾಷೆಯಲ್ಲಿ ದೇಶೀಯರಿಂದ ಆಗುತ್ತಿರುವ ಪತ್ರಿಕೆಗಳಲ್ಲಿ ಮೂರು ನಾಲ್ಕರ ಹೊರತು ಉಳಿದುವು ಅಷ್ಟೇನೂ ಒಳ್ಳೆಯ ಸ್ಥಿತಿಯಲ್ಲಿಲ್ಲ. ಅನೇಕ ಇಂಗ್ಲಿಷ್ ಪತ್ರಿಕೆಗಳು ಹೀನ ದಶೆಯಲ್ಲಿವೆ. ದೇಶಭಾಷಾ ಪತ್ರಿಕೆಗಳಲ್ಲಿ ಪ್ರಸಿದ್ಧವಾದ ಕೆಲವನ್ನು ಬಿಟ್ಟರೆ, ಮಿಕ್ಕವು ಯಾವ ದೃಷ್ಟಿಯಿಂದ ನೋಡಿದರೂ ಉನ್ನತ ಸ್ಥಿತಿ ಯಲ್ಲಿಲ್ಲ. ಕನ್ನಡ ನಾಡಿನ ಪತ್ರಿಕೆಗಳ ಸ್ಥಿತಿಯಂತೂ ಪರಮ ಶೋಚ ನೀಯವಾಗಿದೆ. ಬಂಗಾಳದಲ್ಲಿ "ವಸುಮತಿ" ಮೊದಲಾದುವೂ, ಮಹಾರಾಷ್ಟ್ರದಲ್ಲಿ "ಕೇಸರಿ" ಮೊದಲಾದುವೂ ಸರ್ವತ್ರ ಪ್ರಸಿದ್ಧ ವಾದ ಪತ್ರಿಕೆಗಳು. ಅವುಗಳನ್ನು ಹತ್ತಾರು ಸಾವಿರ ಮಂದಿ ಓದು ತ್ತಾರೆ. ಅದರಿಂದ ಅವುಗಳಿಗೆ ಹತ್ತಾರು ಸಾವಿರ ರೂಪಾಯಿಗಳ ಲಾಭ ಏದೆ. ಅದರಿಂದ ಅವು ಇನ್ನೂ ಹತ್ತಾರು ತೆರಗಳಲ್ಲಿ ತಮ್ಮ ಸೌಕರ್ಯ ಗಳನ್ನು ಹೆಚ್ಚಿಸಿಕೊಂಡು, ಹೆಚ್ಚು ಹೆಚ್ಚಾಗಿ ಸೇವೆಮಾಡಲು ಶಕ್ತವಾಗು ತ್ತವೆ. ಈಚೆಗೆ ಹಿಂದೀ ಭಾಷೆಯಲ್ಲಿಯೂ, ತಮಿಳಿನಲ್ಲಿಯೂ, ತೆಲುಗಿ ನಲ್ಲಿಯೂ ಪ್ರಜಾರಂಜಕಗಳಾದ ದಿನ ಪತ್ರಿಕೆಗಳೂ ವಾರ ಪತ್ರಿಕೆಗಳೂ ಆಗಿವೆ. ನಮ್ಮ ಕನ್ನಡದಲ್ಲಿಯಾದರೋ ಅವುಗಳೊಡನೆ ಹೋಲಿಸಲಾಗು ವಷ್ಟು ಅಭಿವೃದ್ಧಿಯುಳ್ಳ ಪತ್ರಿಕೆಯು ಹೆಸರಿಗಾದರೂ ಒಂದಿಲ್ಲ.

ಇದಕ್ಕೆ ಕಾರಣವೇನಿರಬಹುದು? ಅನೇಕ ಕಾರಣಗಳು ಇರಬಹುದು. ಆದರೆ ಮಹಾಜನರ ಔದಾಸೀನ್ಯವು ಅವುಗಳಲ್ಲಿ ಮುಖ್ಯವಾದುದೆಂದು ನಾನು ನಂಬಿದ್ದೇನೆ. ಮಹಾಜನರಿಗೆ ಪತ್ರಿಕೆಗಳ ಬೆಲೆ ಎಷ್ಟೆಂಬುದನ್ನು ತಿಳುಹಿಸಿಕೊಟ್ಟು, ಪತ್ರಿಕೆಗಳ ಕ್ಷೀಣದಶೆಗೆ ಮೂಲಕಾರಣವಾಗಿರುವ ಅವರ ಔದಾಸೀನ್ಯವನ್ನು ಹೋಗಲಾಡಿಸುವುದು ನಮಗೆಲ್ಲರಿಗೂ ಪ್ರಥಮ ಕರ್ತವ್ಯವಾಗಿರುತ್ತದೆ. ಈ ಕರ್ತವ್ಯವು ನಮ್ಮಗಳ ಸ್ವಂತ ಖ್ಯಾತಿ ಲಾಭಗಳಿಗೆ ಸೇರಿದ್ದಲ್ಲ. ದೇಶದ ಶಾಶ್ವತ ಹಿತಕ್ಕೆ ಸೇರಿದ್ದು.

## ಪತ್ರಿಕೆಯ ಹೊರಗಿನ ಸೊಗಸು

ನಮ್ಮ ದೇಶದಲ್ಲಿ ಪತ್ರಿಕೆಗಳಿಗೆ ಇರತಕ್ಕ ಕೊರತೆಗಳನ್ನು ಸ್ವಲ್ಪ ವಿವರವಾಗಿ ವಿಚಾರಮಾಡೋಣ. ಮೊದಲು ನೋಡಬೇಕಾದುದು ಅವುಗಳ ಬಾಹ್ಯ ರೂಪ; ಏಕೆಂದರೆ, ಪತ್ರಿಕೆಯ ಆಕಾರ ಮುದ್ರಣಗಳು ರಮ್ಯವಾಗಿಲ್ಲದಿದ್ದರೆ ಅವು ವಾಚಕರನ್ನು ಸಂಪಾದಿಸುವುದು ಕಷ್ಟ. ಸಾಮಾನ್ಯ ಜನರು ಪತ್ರಿಕೆಯನ್ನು ಕರ್ತವ್ಯ ಬುದ್ಧಿಯಿಂದ ಓದತಕ್ಕವರಲ್ಲ. ಪತ್ರಿಕಾ ವಾಚನವು ವ್ರತವಲ್ಲ, ಶ್ರಾದ್ಧವಲ್ಲ; ಜೀವನ ಸಂಪಾದನೆಯ ಕಾರ್ಯವೂ ಅಲ್ಲ; ಅದನ್ನು ಓದಬೇಕೆಂಬ ನಿರ್ಬಂಧವು ಯಾವ ವಿಧದಲ್ಲಿಯೂ ಇಲ್ಲ. ಪತ್ರಿಕೆಯನ್ನೋದುವುದು ವಿನೋದಕ್ಕಾಗಿ, ಚಿಂತೆಯನ್ನು ಕಳೆಯುವುದಕ್ಕಾಗಿ, ಸಾಧ್ಯವಾದರೆ ಸ್ವಲ್ಪ ಮಟ್ಟಿಗೆ ದೇಶಾಭಿಮಾನದ ಆವೇಶವನ್ನು ಕ್ಷಣಮಾತ್ರ ತಾಳುವುದಕ್ಕಾಗಿ. ಹೀಗಿರುವಲ್ಲಿ, ಒರಟು ಕಾಗದದಮೇಲೆ, ಮುಟ್ಟಿದರೆ ಕೈ ಕೆಡಿಸುವಷ್ಟು ಮಸಿ ಹಾಕಿ, ಕಣ್ಣಿಗೆ ಸಹ್ಯವಲ್ಲದಹಾಗೆ ಅಚ್ಚುಮಾಡಿದ ಪತ್ರಿಕೆಯಲ್ಲಿ ಎಂಥ ಸರಸ ಕವಿತೆಯಿದ್ದರೇನು, ಎಂಥ ಘನ ವೇದಾಂತವಿದ್ದರೇನು, ಎಂಥ ಪ್ರಶಸ್ತ ರಾಜಕೀಯ ಜಿಜ್ಞಾಸೆಯಿದ್ದರೇನು? ಲೇಖಕ ಚಾಲಕರಂತೆಯೇ ವಾಚಕನೂ ಪಾರಮಾರ್ಥಿಕ ದೃಷ್ಟಿಯುಳ್ಳವನಾದರೆ, ಅವನು ಪತ್ರಿಕೆಯ ಹೊರಗಿನ ವಿಕಾರವನ್ನು ಎಣಿಸದೆ, ಒಳಗಿನ ತಿರುಳನ್ನೇ ಹುಡುಕುತ್ತ ಹೋಗುವನು. ಆದರೆ ನಮ್ಮ ದುರದೃಷ್ಟದಿಂದ ಈ ಪ್ರಪಂಚದಲ್ಲಿ ಅಂಥಾ ತತ್ವಾನ್ವೇಷಿಗಳು ನೂರರಲ್ಲಿ

ಒಬ್ಬರಂತೆ ಕೂಡ ಸಿಕ್ಕುವುದಿಲ್ಲ. ತೊಂಬತ್ತೊಂಬತ್ತು ಮಂದಿ ಪಾತ್ರೆಯ ಮೇಲಿರುವ ಕೊಳೆಯನ್ನು ನೋಡಿ ಅದರೊಳಗಿನ ಹಾಲನ್ನೂ ಅಸಹ್ಯದಿಂದ ಚೆಲ್ಲತಕ್ಕವರು. ಆದಕಾರಣ ನಮ್ಮ ಪತ್ರಿಕೆಗಳು ಬಾಹ್ಯ ಸೌಂದರ್ಯವನ್ನು ಹೆಚ್ಚಿಸಿಕೊಳ್ಳುವುದು ಆವಶ್ಯಕವಾಗಿದೆ. ಈ ಮಾತಿಗಾಗಿ ನಮ್ಮ ಧಾರವಾಡದ ಬಂಧುಗಳು ನನ್ನಲ್ಲಿ ಆಗ್ರಹಮಾಡಕೂಡದೆಂದು ಬೇಡುತ್ತೇನೆ. ಇದ್ದುದ್ದರಲ್ಲಿ ಮಂಗಳೂರಿನ ಒಂದೆರಡು ಪತ್ರಿಕೆಗಳೂ, ಮೈಸೂರು ಕಡೆಯ ಒಂದೆರಡೂ ಸುಮಾರಾಗಿವೆ. ಆದರೆ ಎಲ್ಲವೂ ಇನ್ನೂ ಉತ್ತಮವಾಗಬೇಕೆಂದು ನನ್ನ ಆಶೆ.

ಈಚೀಚೆಗೆ ಕೆಲವು ಪತ್ರಿಕೆಗಳಲ್ಲಿ ಭಾವಚಿತ್ರಗಳೂ ಬರುತ್ತಿವೆ. ನಮ್ಮ ದೇಶದ ಭಾರೀ ಇಂಗ್ಲಿಷ್ ಪತ್ರಿಕೆಗಳಲ್ಲಿ ಬರುವ ಭಾವಚಿತ್ರಗಳೇ ತೆನಾಲಿ ರಾಮಕೃಷ್ಣನ ಚಿತ್ರಗಳಂತೆಯೂ, "ಪಂಚ್" ಮೊದಲಾದ ಪ್ರಸಿದ್ಧ ಇಂಗ್ಲಿಷ್ ಹಾಸ್ಯ ಪತ್ರಿಕೆಗಳಲ್ಲಿರುವ ಆಭಾಸ ಚಿತ್ರಗಳಿಗೆ ಪ್ರತಿಯಾದ ವಿಕಾರಗಳಂತೆಯೂ ಇರುವಲ್ಲಿ, ಕನ್ನಡ ಪತ್ರಿಕೆಗಳ ಚಿತ್ರ ವೈಭವವನ್ನು ವರ್ಣನೆ ಮಾಡುವುದು ಅನಾವಶ್ಯಕ. ಒಂದೊಂದು ವೇಳೆ ಈ ಚಿತ್ರಗಳನ್ನು ನೋಡಿದರೆ ಚಿತ್ರಿತರಾದವರಿಗೂ ಅವರ ಬಂಧು ಮಿತ್ರರಿಗೂ ನಗು ಬಂದೀತೋ ಅಳು ಬಂದೀತೋ ಊಹಿಸುವುದು ಕಷ್ಟ. ಚಿತ್ರಗಳನ್ನು ಅಚ್ಚುಮಾಡುವುದು ವೆಚ್ಚದ ಕೆಲಸ. ನುಣುಪಿನ ಕಾಗದ, ಒಳ್ಳೆಯ ಮಸಿ, ಚೊಕ್ಕಟವಾದ ಪಡಿಯಚ್ಚು, ನಯವಾದ ಯಂತ್ರ, ನಾಜೂಕಾದ ಕೈಗಾರಿಕೆ—ಇವುಗಳಲ್ಲಿ ಯಾವುದಿಲ್ಲದಿದ್ದರೂ ಚಿತ್ರವು ಅಂದವಾಗುವುದಿಲ್ಲ. ಈಚೆಗೆ ಬೆಂಗಳೂರಿನ ಒಂದೆರಡು ಪತ್ರಿಕೆಗಳವರು ಪ್ರಕಟಿಸಿರುವ ಭಾವಚಿತ್ರಭರಿತಗಳಾದ ವಿಶೇಷ ಸಂಚಿಕೆಗಳು ಅಂದವಾಗಿವೆ ಎಂದು ಹೇಳಿಕೊಳ್ಳಲು ನನಗೆ ಸಂತೋಷವಾಗಿದೆ.

## ವಾಚನ ವಿಷಯಗಳು

ಇನ್ನು ಪತ್ರಿಕೆಗಳಲ್ಲಿಯ ಲೇಖನ ವಿಷಯಗಳನ್ನು ಕುರಿತು ವಿಚಾರ ಮಾಡೋಣ. ವಿಷಯಗಳನ್ನು ನಾಲ್ಕು ಭಾಗಗಳಾಗಿ ವಿಂಗಡಿಸಬಹುದು:—

(೧) ವೃತ್ತಾಂತ ಭಾಗ,
(೨) ವಾದ ಭಾಗ,
(೩) ವಿದ್ಯಾಪ್ರಚಾರ ಭಾಗ,
(೪) ವ್ಯಾಪಾರ ಪ್ರಕಟನೆಗಳ ಭಾಗ.

## (೧) ವೃತ್ತಾಂತ ಭಾಗ

ವೃತ್ತಾಂತ ಭಾಗದಲ್ಲಿ ಕನ್ನಡ ಪತ್ರಿಕೆಗಳು ಬಹುಮಟ್ಟಿಗೆ ಇಂಗ್ಲಿಷ್ ಪತ್ರಿಕೆಗಳಿಂದ ತರ್ಜುಮೆ ಮಾಡಿಕೊಂಡು ಜೀವಿಸಬೇಕಾಗಿದೆ. ಈ ತರ್ಜುಮೆಗಳು ಕೂಡ ಅನೇಕ ವೇಳೆ ಸಮರ್ಪಕವಾಗಿರುವುದಿಲ್ಲ. ವಾರ್ತಾ ಪ್ರಚಾರ ಕಾರ್ಯಕ್ಕೆ ನಮ್ಮ ಪತ್ರಿಕೆಗಳು ತಕ್ಕಷ್ಟು ಗಮನ ಕೊಡುತ್ತಿಲ್ಲವೆಂದು ನನ್ನ ಭಾವನೆ. ಈ ಭಾಗದಲ್ಲಿ ಮೈಸೂರಿನ "ವೃತ್ತಾಂತ ಪತ್ರಿಕೆ"ಯು ಶ್ಲಾಘ್ಯವಾಗಿದೆಯೆಂದು ನನಗೆ ತೋರುತ್ತದೆ. ವೃತ್ತಾಂತಗಳನ್ನು ಆರಿಸಿ ಪೋಣಿಸುವುದರಲ್ಲಿ ಒಂದು ಕ್ರಮವಿರಬೇಕು. ವೃತ್ತಾಂತ ಪ್ರಕಟನೆಯ ಮುಖ್ಯೋದ್ದೇಶವು ಜನರ ದಿನಚರಿಗೆ ಅವಶ್ಯವಾದ ತಿಳಿವಳಿಕೆಯನ್ನು ಕೊಡುವುದು. ರಾಜಕೀಯ ವ್ಯತ್ಯಾಸಗಳು, ಸಾಮಾಜಿಕ ಸಮಾರಂಭಗಳು, ಪ್ರಸಿದ್ಧ ಜನರ ಆಗಮನ ಸಂಚಾರಗಳು, ವ್ಯಾಪಾರದ ಬದಲಾವಣೆಗಳು, ಶಾಸ್ತ್ರಕಲೆಗಳಲ್ಲಿ ನೂತನ ರಚನೆಗಳು—ಇವೇ ಮೊದಲಾದುವನ್ನು ಈ ಭಾಗವು ತಿಳಿಸಬೇಕು. ಈ ನಾನಾ ಸಂಗತಿಗಳು ಸ್ವದೇಶಕ್ಕೆ ಸಂಬಂಧಪಟ್ಟವಾದರೆ ಹೆಚ್ಚು ಗಮನಕ್ಕೆ ಅರ್ಹವಾಗುವುವು. ಇಂಥವುಗಳನ್ನು ಬಿಟ್ಟು, ಮೂರು ಕೈಯುಳ್ಳ ಮನುಷ್ಯ, ಎರಡು ತಲೆಯ ಆಡು, ಹಲ್ಲಿಲ್ಲದ ಹಾವು—ಇಂಥಾ ಅದ್ಭುತ ಕಥೆಗಳನ್ನು ಪ್ರಕಟಿಸುತ್ತಿದ್ದರೆ ಪತ್ರಿಕೆಯ ಮುಖ್ಯೋದ್ದೇಶವು ನೆರವೇರಿದಂತಾಗುವುದಿಲ್ಲ. ಅದರ ಹೆಸರೇ ವಾರ್ತಾಪತ್ರಿಕೆ—"News-paper", "News" ಅಥವಾ ವಾರ್ತೆಯೇ ಪತ್ರಿಕೆಯ ಮೂಲ ಸಾಮಗ್ರಿ. ವಾರ್ತೆಯು ಯಾವುದಾದರೊಂದು ವಿಧದಲ್ಲಿ ಜನಜೀವನಕ್ಕೆ ಪ್ರತ್ಯಕ್ಷವಾಗಿಯೂ ಸಮೀಪವಾಗಿಯೂ ಸಂಬಂಧಪಟ್ಟಿರಬೇಕು. ವಾಚಕರಿಗೆ

ಲೋಕಪರಿಸ್ಥಿತಿಯನ್ನು—ಎಂದರೆ, ಸ್ವದೇಶ ಪರದೇಶಗಳಲ್ಲಿ ದಿನೇ ದಿನೇ ಆಗುತ್ತಿರುವ ಅಭಿವೃದ್ಧಿಗಳನ್ನೂ ಸಂಧಾನಗಳನ್ನೂ, ಅವುಗಳ ಕಾರಣ ಗಳನ್ನೂ ಉದ್ದೇಶಗಳನ್ನೂ—ಕ್ರಮ ಕ್ರಮವಾಗಿ ತಿಳಿಸಿಕೊಡುವುದೇ ಪತ್ರಿಕೆಯ ಪ್ರಥಮ ಕರ್ತವ್ಯ. ಆದ್ದರಿಂದ ಪ್ರತಿಯೊಂದು ದಿನ ಪತ್ರಿಕೆಯೂ ಒಂದು ಪುಟವನ್ನಾದರೂ, ಪ್ರತಿಯೊಂದು ವಾರ ಪತ್ರಿಕೆಯೂ ಎರಡು ಮೂರು ಪುಟಗಳನ್ನಾದರೂ ಪ್ರತಿಯೊಂದು ಸಂಚಿಕೆ ಯಲ್ಲಿಯೂ ಸಮಾಚಾರ ಸಂಗ್ರಹಕ್ಕಾಗಿ ಗೊತ್ತಾಗಿಡುವುದು ಆವಶ್ಯಕ ವೆಂದು ನನಗೆ ತೋರುತ್ತದೆ. ಸಮಾಚಾರಗಳನ್ನು ಪ್ರಾಂತೀಯ ವೃತ್ತಾಂತ, ಭಾರತೀಯ ವೃತ್ತಾಂತ, ವಿದೇಶೀಯ ವೃತ್ತಾಂತ—ಎಂಬು ದಾಗಿ ಮೂರು ವಿಭಾಗವಮಾಡಿ ವಿಷಯದ ಪ್ರಾಧಾನ್ಯಕ್ಕೆ ತಕ್ಕಂತೆ ಬೇರೆ ಬೇರೆ ಸಂಗತಿಗಳನ್ನು ಸಂಗ್ರಹಿಸಿ ಯೋಜನೆಮಾಡಿ ಕೊಟ್ಟರೆ ಓದು ವವರಿಗೆ ಹಿತವಾಗಿರುವುದು.

## ಸ್ಥಳೀಯ ವಾರ್ತೆ

ಕನ್ನಡ ನಾಡಿನಲ್ಲಿ ಪ್ರಜಾ ಹಿತಕ್ಕಾಗಿ ಆಗಬೇಕಾಗಿರುವ ಒಂದು ದೊಡ್ಡ ಕೆಲಸವು ಸ್ಥಳೀಯ ವಿದ್ಯಮಾನಗಳ ಪ್ರಕಟನೆ. ನಮ್ಮ ದೊಡ್ಡ ದೊಡ್ಡ ಊರುಗಳಲ್ಲಿ ಜನರ ಸ್ಥಿತಿ ಗತಿಗಳು ಹೇಗಿವೆ, ಅವರ ಕುಂದು ಕೊರತೆಗಳೇನು, ಅವರ ಆಲೋಚನೆಗೆ ಸಿಕ್ಕಿರುವ ವಿಷಯಗಳೇನು— ಇವುಗಳನ್ನು ಕುರಿತು ಪಕ್ಷಕ್ಕೊಂದಾವರ್ತಿಯಾದರೂ ಊರಿನವ ರೊಬ್ಬರು ಒಂದು ಪತ್ರವನ್ನು ಸಂಕ್ಷೇಪವಾಗಿ ಜವಾಬ್ದಾರೀ ಬುದ್ಧಿ ಯಿಂದ ಬರೆದು ಆ ಪ್ರಾಂತದ ಪತ್ರಿಕೆಗಳಿಗೆ ಕಳುಹಿಸಬೇಕು. ಈಗ ನಮ್ಮ ದೇಶದ ಅನೇಕ ದೊಡ್ಡ ದೊಡ್ಡ ಊರುಗಳ ಇರುವಿಕೆಯೇ ಹೊರಗಿನ ಪ್ರಪಂಚಕ್ಕೆ ಗೊತ್ತಾಗುವಂತಿಲ್ಲ. ಪಕ್ಷ ಪತ್ರವೊಂದಾದರೂ ತಾಲ್ಲೂಕು ತಾಲ್ಲೂಕಿನಿಂದಲೂ ಬಂದು ಪತ್ರಿಕೆಗಳಲ್ಲಿ ಪ್ರಕಟವಾಗು ತ್ತಿದ್ದರೆ, ತಾಲ್ಲೂಕಿನ ಜನರಿಗೂ ಹೊರಗಿನ ಪ್ರಪಂಚಕ್ಕೂ ಒಂದು ಸಂಬಂಧವುಂಟಾಗುವುದು. ತಾಲ್ಲೂಕಿನ ಸ್ಥಿತಿಯು ಉತ್ತಮಪಡಲು ಅದರಿಂದ ಮಾರ್ಗವಾಗುವುದು.

ಇದಲ್ಲದೆ ಕರ್ಣಾಟಕಸ್ಥರೆಲ್ಲ ಏಕೀಭವಿಸಬೇಕಾದರೆ ಕರ್ಣಾಟಕದ ನಾನಾಭಾಗಗಳವರು ಪರಸ್ಪರ ಸ್ಥಿತಿ ಗತಿಗಳನ್ನು ಸಾಧ್ಯವಾದಷ್ಟು ಚೆನ್ನಾಗಿ ಅರಿತುಕೊಳ್ಳಲು ಅವಕಾಶವಿರಬೇಕು. ನಮ್ಮ ನಾನಾ ಭಾಗಗಳ ಪತ್ರಿಕೆಗಳು ಆಯಾ ಪ್ರದೇಶಗಳ ವರ್ತಮಾನಗಳನ್ನು ಚೆನ್ನಾಗಿ ಶೇಖರಿಸಿಕೊಡುತ್ತ ಬಂದರೆ ಅದು ಕರ್ಣಾಟಕರ ಅನ್ಯೋನ್ಯ ಪರಿಚಯಕ್ಕೂ ಐಕಮತ್ಯಕ್ಕೂ ಸಾಧಕವಾಗುವುದು.

## ಸಂಕ್ಷಿಪ್ತ ಲಿಪಿ

ಈ ಸಂದರ್ಭದಲ್ಲಿ ಗಮನಿಸಬಹುದಾದ ಅಂಶವು ಒಂದಿದೆ. ಕನ್ನಡದಲ್ಲಿ 'ಷಾರ್ಟ್ ಹ್ಯಾಂಡ್', ಎಂದರೆ ಸಂಕುಚಿತ ಲಿಪಿಯು, ಇನ್ನೂ ತಯಾರಾಗಿಲ್ಲ. ಇದರಿಂದ ಉಪನ್ಯಾಸ ಭಾಷಣಗಳನ್ನು ಇಂಗ್ಲಿಷ್ ಪತ್ರಿಕೆಗಳಲ್ಲಿ ಕೊಡುವಂತೆ ಯಥಾ ಶ್ರುತವಾಗಿ ಕೊಡುವುದು ಈಗ ನಮಗೆ ಸಾಧ್ಯವಿಲ್ಲ. ಭಾಷಣದ ಮುಖ್ಯ ಗುಣವು ಅದರ ವಾಗ್ಧೋರಣೆ, ವ್ಯಂಗ್ಯ ಪದಪ್ರಯೋಗ ಮುಂತಾದುವುಗಳಲ್ಲಿರುತ್ತದೆ. ಭಾಷಣದ ಮುಖ್ಯ ವಿಷಯಗಳನ್ನು ಸಂಕ್ಷೇಪಿಸಿ ಅದರ ಸಾರಾಂಶವನ್ನು ಮಾತ್ರ ನಾವು ಕೊಟ್ಟರೆ, ಅದರಲ್ಲಿ ಭಾಷಕನ ಶಬ್ದಪ್ರಭಾವವಿಲ್ಲದೆ ಹೋಗಿ, ಅದು ಬಹುಪಟ್ಟಿಗೆ ನೀರಸವಾಗುತ್ತದೆ. ನಮ್ಮಲ್ಲಿ ಸಾರ್ವಜನಿಕ ಸಮಾರಂಭಗಳು ಪ್ರಬಲಿಸಿದಹಾಗೆಲ್ಲ ಉಪನ್ಯಾಸಗಳು ಹೆಚ್ಚಾಗುವುವು. ಅವುಗಳನ್ನು ಯಥಾ ಶ್ರುತವಾಗಿ ಮುದ್ರಿಸಿಕೊಟ್ಟ ಹಾಗೆಲ್ಲ ಪತ್ರಿಕೆಗಳ ಸ್ವಾರಸ್ಯವೂ ಪ್ರಾಬಲ್ಯವೂ ಹೆಚ್ಚುವುವು. ಇದಕ್ಕೆ ಬೇಕಾದುದು ಸಂಕ್ಷೇಪ ಲಿಪಿ. ಅದನ್ನು ಏರ್ಪಡಿಸಲು ಬೆಂಗಳೂರಿನ ಸಂಕ್ಷಿಪ್ತ ಲಿಪಿ ಕುಶಲರು ಒಬ್ಬರಿಬ್ಬರು ಪ್ರಯತ್ನ ಮಾಡುತ್ತಿದ್ದಾರೆ. ಅವರ ಪ್ರಯತ್ನವು ಸಫಲವಾದರೆ ಕನ್ನಡ ವೃತ್ತಪತ್ರಿಕೆಗಳಿಗೆ ದೊಡ್ಡ ಉಪಕಾರವಾಗುವುದು.

## (೨) ವಾದ ಭಾಗ

ಇನ್ನು ವಾದ ಭಾಗದ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳಬೇಕೆಂದಿರುವೆನು. ಆದರೆ ಅದು ಸ್ವಲ್ಪ ಅಪಾಯದ ಕೆಲಸ.

ಏಕೆಂದರೆ, ಅದು ಅಭಿಪ್ರಾಯಗಳ ವಿಚಾರಕ್ಕೂ ನೀತಿಯ ವಿಚಾರಕ್ಕೂ ಸಂಬಂಧಪಟ್ಟ ವಿಷಯ. ಅದರಲ್ಲಿ ನಾನು ತತ್ತ್ವೋಪದೇಶ ಮಾಡಲು ಹೊರಟಿರುವೆನೆಂದಾಗಲಿ, ಇತರರಿಗೆ ತತ್ತ್ವೋಪದೇಶವು ಅವಶ್ಯವಾಗಿದೆಯೆಂದಾಗಲಿ ಯಾರೂ ನನ್ನ ಮಾತುಗಳಿಗೆ ಅರ್ಥಮಾಡಬಾರದು. ಆತ್ಮಪರೀಕ್ಷೆಯ ಅಭ್ಯಾಸವುಳ್ಳ ಪ್ರತಿಯೊಬ್ಬ ಪತ್ರಿಕಾ ಚಾಲಕನಿಗೂ ಅಂತರಂಗದಲ್ಲಿ ತನ್ನ ಹಿಂದಿನ ನಡತೆಯ ವಿಷಯವಾಗಿ ಪಶ್ಚಾತ್ತಾಪ ವಿಷಾದಗಳು ಒಂದೊಂದು ವೇಳೆಯಾದರೂ, ಸ್ವಲ್ಪ ಸ್ವಲ್ಪವಾಗಿಯಾದರೂ ಬರುತ್ತವೆಂದು ನಾನು ತಿಳಿದುಕೊಂಡಿದ್ದೇನೆ. ತಾನು ಆಡಿದ್ದೆಲ್ಲವೂ ಸರಿ, ಮಾಡಿದ್ದೆಲ್ಲವೂ ಹಿತ; ತನ್ನ ಅಭಿಪ್ರಾಯದಲ್ಲಿ ದೋಷವಿಲ್ಲ, ತನ್ನ ಮರುಕಕ್ಕೆ ಕಾರಣವಿಲ್ಲ—ಎಂದು ಹೇಳಿಕೊಳ್ಳುವ ಪತ್ರಿಕಾ ಲೇಖಕರು ಇರಬಹುದೋ ಏನೋ! ನನಗೆ ಅಂಥಾ ಯೋಗವಿಲ್ಲ. ಮನುಷ್ಯಮಾತ್ರನಾದವನಿಗೆ ದಿವ್ಯ ದೃಷ್ಟಿಯಿಲ್ಲ. ನಮ್ಮ ಕಣ್ಣಿನ ನೋಟವು ಲೋಕದ ಒಳಮರ್ಮಗಳನ್ನು ಭೇದಿಸಿ ತಿಳಿಯಲಾರದು. ಈ ದಿನ ನಮಗೆ ಸರಿಯೆಂದು ತೋರುವುದು ನಾಳೆ ಬೇರೊಂದು ಕಾರಣದಿಂದ ತಪ್ಪೆಂದು ತೋರಬಹುದು. ಒಂದು ಪಕ್ಕದಿಂದ ಹಾವಾಗಿ ಕಂಡುದು ಇನ್ನೊಂದು ಪಕ್ಕದಿಂದ ಹಾರವಾಗಿ ಕಾಣಿಸಬಹುದು. ಜಗದ್ವ್ಯಾಪಾರದಲ್ಲಿ ನನ್ನ ತಿಳಿವೇ ಎಲ್ಲರಿಗೂ ತಿಳಿವು; ಇಂದಿನ ತಿಳಿವೇ ಎಂದಿಗೂ ತಿಳಿವು—ಎಂದು ವಿಚಾರಪರರಾದವರು ಯಾರೂ ಹೇಳಲಾರರು. ನನಗಂತೂ ಅಂಥಾ ಧೈರ್ಯವಿಲ್ಲ. ನನಗಿರುವುದು ಮಿತವಾದ ದೃಷ್ಟಿ, ಮಿತವಾದ ಶಕ್ತಿ. ಇಂಥವನು ಹಿಂದೆ ತಪ್ಪಿರಬಹುದು, ಮುಂದೆ ತಪ್ಪಬಹುದು. ಆದರೂ ಅಂಥವನೂ ಕೂಡ ಸಮಸ್ತರಿಗೂ ಗ್ರಾಹ್ಯಗಳಾದ ಒಂದೆರಡು ನೀತಿಗಳನ್ನು ಜ್ಞಾಪಕಕ್ಕೆ ತಂದುಕೊಳ್ಳಬಹುದಲ್ಲವೆ? ನಾನು ಆಡುವ ಮಾತು ಉಪಾಧ್ಯಾಯನು ಶಿಷ್ಯನೊಡನೆ ಆಡುವ ರೀತಿಯದು ಎಷ್ಟು ಮಾತ್ರವೂ ಅಲ್ಲ. ಅಣ್ಣತಮ್ಮಂದಿರೊಡನೆಯೂ ಆಪ್ತಮಿತ್ರರೊಡನೆಯೂ ಮನುಷ್ಯನು ಕಳವಳವನ್ನು ಹೇಳಿಕೊಂಡು ನೀತಿ ವಿಮರ್ಶೆ ಮಾಡುವ ರೀತಿಯಲ್ಲಿ ನಾನು ತಮಗೆ ಅರಿಕೆ ಮಾಡತಕ್ಕವನಾಗಿದ್ದೇನೆ.

# ಪತ್ರಿಕೆಯೇ ಪ್ರಜೆಯ ಮಂತ್ರಿ

ಪ್ರಜಾರಾಜ್ಯದಲ್ಲಿ ವೃತ್ತಪತ್ರಿಕೆಯು ಪ್ರಜೆಯ ಅಂತರಂಗವೆಂದು ಮೇಲೆ ಹೇಳಿದೆನಷ್ಟೆ. ಅಂತರಂಗದ ಅತಿ ಶ್ರೇಷ್ಠವಾದ ಕಾರ್ಯವು ವಿವೇಚನೆ. ರಾಜನಿಗೆ ಮಂತ್ರಿಗಳು ಹೇಗೆಯೋ, ಪ್ರಜೆಗೆ ಪತ್ರಿಕೆಗಳು ಹಾಗೆ; ಎಂದರೆ—ಅವು ರಾಜ್ಯಸ್ಥಿತಿಯನ್ನು ಚೆನ್ನಾಗಿ ವಿವರಿಸಿ, ಧರ್ಮಾಧರ್ಮಗಳ ವಿಮರ್ಶೆಯನ್ನು ಸುಲಭಪಡಿಸತಕ್ಕವುಗಳಾಗಬೇಕು. ಹಿಂದೆ ಸನ್ಮಂತ್ರಿಗಳಾದವರು ರಾಜನೊಡನೆ ಕುಳಿತು ಆಲೋಚಿಸಿ, ಸಲಹೆಗಳನ್ನು ಕೊಟ್ಟು, ನಿರ್ಣಯ ಕಾರ್ಯವನ್ನು ರಾಜನಿಗೇ ಬಿಡುತ್ತಿದ್ದರು; ಆಲೋಚನೆ ಮಾಡುವ ಕೆಲಸವನ್ನು ರಾಜನಿಗೆ ತಪ್ಪಿಸಿ, ತಾವೇ ನಿರ್ಣಯಗಳನ್ನು ಕೊಟ್ಟು, ಅವನನ್ನು ಸಿಂಗರದ ಬೊಂಬೆಯಾಗಿ ಮಾಡುತ್ತಿರಲಿಲ್ಲ. ಈಗ ಪತ್ರಿಕೆಗಳೂ ಹಾಗೆಯೇ ಪ್ರಜೆಗಳಲ್ಲಿ ಸ್ವತಂತ್ರ ವಿಚಾರ ಬುದ್ಧಿಯನ್ನು ಬಲಪಡಿಸತಕ್ಕವುಗಳಾಗಿರಬೇಕು. ಆದರೆ ಕೆಲಪತ್ರಿಕೆಗಳ ಲೇಖಕರಿಗೆ ಇದು ಸುಲಭವಲ್ಲ. ಅವರು ತಮ್ಮ ಅಭಿಪ್ರಾಯಗಳು ನಿರ್ದೋಷವಾದವುಗಳೆಂದೂ, ತಮ್ಮ ದೃಷ್ಟಿಯು ಸೂಕ್ಷ್ಮಭೇದಕವಾದದ್ದೆಂದೂ ಖಂಡಿತಮಾಡಿಕೊಂಡಿರುತ್ತಾರೆ. ತಮಗೆ ಗೋಚರಿಸದ ಅಂಶವೊಂದಿರಬಹುದೋ ಏನೋ; ತಮ್ಮ ಪ್ರತಿಪಕ್ಷದವರ ವಾದದಲ್ಲಿ ಸ್ವಲ್ಪ ಸತ್ಯವಿದ್ದೀತೋ, ಏನೋ—ಎಂಬ ಶಂಕೆಯು ಅವರ ಚಿತ್ತಕ್ಕೆ ಬರುವುದಿಲ್ಲ. ಹೀಗೆ ದೃಢನಿಶ್ಚಯವುಳ್ಳವರು ಇತರ ಅಭಿಪ್ರಾಯಗಳನ್ನು ಹೇಗೆ ತಾನೆ ಸಹಿಸಿಯಾರು? ನಿರ್ದುಷ್ಟವಾದ ಸಿದ್ಧಾಂತವು ತಮ್ಮದಾಗಿರುವಲ್ಲಿ ಇತರರು ಚರ್ಚೆಮಾಡಿ ಶ್ರಮಪಡುವುದೇಕೆ—ಎಂದು ಅವರು ಕನಿಕರದಿಂದಲೂ ಆಶ್ಚರ್ಯದಿಂದಲೂ ಕೇಳುತ್ತಿರುತ್ತಾರೆ. ನಮ್ಮ ದೇಶದಲ್ಲಿ ಸರಕಾರದ ಅಧಿಕಾರಿಗಳ ಪ್ರಶ್ನೆಯೂ ಅದೇ. ಸ್ಥೂಲ ಸೂಕ್ಷ್ಮಗಳನ್ನು ಚಿಂತಿಸಿ, ನ್ಯಾಯಾನ್ಯಾಯಗಳನ್ನು ವಿಚಾರಿಸಿ ತೀರ್ಮಾನಿಸುವವರು ನಾವಿಲ್ಲಿರಲಾಗಿ, ಪ್ರಜಾಪ್ರತಿನಿಧಿಗಳು ವಾದಿಸಿ ಆಯಾಸಪಡುವುದೇತಕ್ಕೆ, ಪತ್ರಿಕೆಗಳು ಚರ್ಚಿಸಿ ಬಳಲುವುದೇತಕ್ಕೆ,—ಎಂಬುದೇ ನಮ್ಮ ಸರಕಾರದವರ ಸಮಸ್ಯೆ.

## ಸ್ವತಂತ್ರ ವಿವೇಚನೆ

ಈ ವಿಧವಾದ ಆತ್ಮವಿಶ್ವಾಸವುಳ್ಳವರ ಕನಿಕರ ಪರಿತಾಪಗಳೇನೋ ಸ್ತೋತ್ರಾರ್ಹವಾದವೇ. ಆದರೆ ಪ್ರಜೆಗಳು ತಮ್ಮ ಸ್ವಂತ ಬುದ್ಧಿಗೆ ಸ್ವಲ್ಪವಾದರೂ ಕೆಲಸಕೊಡದೆ ಹೋದರೆ, ಆ ಅಂಗವು ಕ್ರಮೇಣ ಕೃಶವಾಗಿ ಕೆಲಸಕ್ಕೆ ಬಾರದೆ ಹೋಗಿ, ಆಮೇಲೆ ಅವರು ಪರಾಧೀನರಾದಾರು, ಎಂದರೆ—ಒಂದು ಕಡೆ ಸರಕಾರದ ಅಧಿಕಾರಿಗಳ ವಶವರ್ತಿಗಳಾದಾರು, ಅಥವಾ ಇನ್ನೊಂದು ಕಡೆ ಪತ್ರಿಕಾಲೇಖಕರ ವಶವರ್ತಿಗಳಾದಾರು. ಅಂತೂ ಇಂತೂ ಪ್ರಜಾಧಿಪತ್ಯವು ಸಿದ್ಧಿಸಿದ ಹಾಗಾಗುವುದಿಲ್ಲ. ಮಗನ ಪುರೋವೃದ್ಧಿಯನ್ನು ಬಯಸುವ ಜಾಣ ತಂದೆಯೂ ಮಗನನ್ನು ಸ್ವಾತಂತ್ರ್ಯಕ್ಕೆ ಬಿಡದೆ ತನ್ನ ಸೆರಳಿನಂತೆ ಇರಿಸಿಕೊಂಡಿರುವುದಿಲ್ಲ; ಎಷ್ಟೋ ವಿಷಯಗಳನ್ನು ಮಗನ ಸ್ವತಂತ್ರ ತೀರ್ಮಾನಕ್ಕೇ ಬಿಟ್ಟು, ಅವನು ಸ್ವಬುದ್ಧಿಯಿಂದ ಜೀವಿಸುವಂತೆ ಮಾಡುತ್ತಾನೆ. ದೂರವಿಚಾರವುಳ್ಳ ಪತ್ರಿಕಾಕರ್ತರೂ ಹಾಗೆಯೇ. ತಮ್ಮ ಅಭಿಪ್ರಾಯಗಳನ್ನು ಮಾತ್ರವೇ ಅವರು ಜನರಿಗೆ ಮೂರು ಹೊತ್ತೂ ಸಾರಿ, ಜನರು ತಮ್ಮ ಸ್ವತಂತ್ರ ವಿವೇಚನೆಯನ್ನು ಬಿಟ್ಟುಬಿಡುವಂತೆ ಪ್ರೇರಿಸುವುದಿಲ್ಲ. ಮಗುವು ಆಹಾರವನ್ನು ಸುಲಭವಾಗಿ ಜೀರ್ಣಿಸಿಕೊಳ್ಳಬೇಕೆಂಬುದೇ ತಾಯಿಯ ಇಷ್ಟವಾಗಿದ್ದರೂ, ಆಕೆ ತುತ್ತನ್ನು ತನ್ನ ಬಾಯಲ್ಲೇ ಅಗಿದು ಆ ಉಗುಳನ್ನು ಮಗುವಿಗೆ ತಿನ್ನಿಸುವುದಿಲ್ಲ. ಆಹಾರವನ್ನು ಪಕ್ವಮಾಡಿ, ಮಗುವೇ ಅದನ್ನು ಕೂಡಿದ ಮಟ್ಟಿಗೂ ತನ್ನ ಕೈಯಿಂದಲೇ ಉಂಡು, ತನ್ನ ಜೀರ್ಣಶಕ್ತಿಯನ್ನು ತಾನಾಗಿ ಹೆಚ್ಚಿಸಿಕೊಳ್ಳುವಂತೆ ಮಾಡುತ್ತಾಳೆ. ವೃತ್ತಪತ್ರಿಕೆಯೂ ಹಾಗೆಯೇ ಮಾಡಬೇಕು. ದೇಶಸ್ಥಿತಿಯನ್ನು ಕುರಿತ ವಿಷಯಗಳನ್ನೆಲ್ಲಾ ಅದು ವೃತ್ತಾಂತ ವರದಿಗಳ ರೂಪದಲ್ಲಿ ಪ್ರಜೆಗಳಿಗೆ ಒದಗಿಸಬೇಕು. ಹಾಗೆ ಸಿದ್ಧವಾದ ವಿಷಯಗಳನ್ನು ಕುರಿತು ಸಂಪಾದಕೀಯ ಲೇಖನದಲ್ಲಿಯೂ ಇತರ ಪ್ರಬಂಧಗಳಲ್ಲಿಯೂ ವ್ಯಾಖ್ಯಾನಮಾಡುವ ಸಂದರ್ಭದಲ್ಲಿ ಯುಕ್ತಿ, ನ್ಯಾಯ, ತರ್ಕ—ಇವುಗಳ ಮೂಲಕ ಗುಣದೋಷಗಳನ್ನು ತೋರಿಸಿಕೊಡಬೇಕು. ಬರಿಯ ದೂಷಣೆ, ಬರಿಯ ಉದ್ಗಾರ, ಬರಿಯ ಮುಷ್ಕರ—

ಇವುಗಳನ್ನ ವಲಂಬಿಸಬಾರದು. ತಾವು ಆಕ್ಷೇಪಣೆಯ ಸೂಚನೆಯನ್ನು ತೋರದೆ, ವಾಚಕರು ತಾವಾಗಿಯೇ ಆಕ್ಷೇಪಿಸುವ ರೀತಿಯಲ್ಲಿ ವಿಷಯ [illegible]ಗಸೆ ಮಾಡುವುದು ಲೇಖಕನ ಕುಶಲತೆ. ಪತ್ರಿಕಾ ಲೇಖಕರು ಮುಖ್ಯವಾಗಿ ಬ[illegible] ಸಿದ್ಧಾಂತವನ್ನಲ್ಲ, ಸಿದ್ಧಾಂತ ಮಾಡುವ ಕ್ರಮವನ್ನ. ಆದಕಾರಣ, ಪತ್ರಿಕೆ[illegible] ಮೊದಲನೆಯ ಭಾಗವಾದ ಸಂಪಾದಕಸ್ಥಾನದ ಲೇಖನಗಳು ಆವೇಶ[illegible]ದಲ್ಲಿ ಪ್ರಧಾನವಾಗಿರುವುದು ಅಷ್ಟು ಅವಶ್ಯವಲ್ಲ; ಅವು ವಿವೇಚನ ಪ್ರಧಾನವಾಗಿರುವುದು ಅತ್ಯಂತಾವಶ್ಯಕ.

## ಮಾರ್ಲೇ ಅವರ ಕಥೆ

ಮಹಾಜನರ ಬುದ್ಧಿಯನ್ನು ವೃತ್ತಪತ್ರಿಕೆಗಳು ಸೋಮಾರಿತನಕ್ಕೆ ತಳ್ಳದೆ, ಅವರು ಸ್ವತಂತ್ರ ವಿವೇಚನೆಯನ್ನು ಅಭ್ಯಾಸ ಮಾಡುವಂತೆ ಪ್ರೋತ್ಸಾಹಕೊಡಬೇಕೆಂಬ ಈ ಸೂಚನೆಯು ಈಗ ಪಾಶ್ಚಾತ್ಯ ದೇಶಗಳಲ್ಲಿಯೂ ಆವಶ್ಯಕವಿದೆಯೆಂದು ಬಲ್ಲವರು ಹೇಳಿದ್ದಾರೆ. ಸ್ವಯಂ ಪತ್ರಿಕಾ ಲೇಖಕರಾಗಿದ್ದು ಜಗದ್ವಿಖ್ಯಾತರಾದ ಲಾರ್ಡ್ ಮಾರ್ಲೆಯವರು ಪತ್ರಿಕೆಗಳನ್ನು (that huge engine for keeping discussion on a low level)—"ವಾದ ಪ್ರಸಂಗವನ್ನು ಕೆಳಕ್ಕೆ ತಳ್ಳಿರಿಸುವ ಯಂತ್ರ" ಎಂದು ಕರೆದಿದ್ದಾರೆ. ಅವರು ಈ ವಿಚಾರವಾಗಿ ಹೇಳಿರುವ ಸ್ವಾನುಭವದ ಮಾತುಗಳು ಪತ್ರಿಕಾ ಚಾಲಕರಿಗೆಲ್ಲ ಜ್ಞಾಪಕಾರ್ಹವಾಗಿವೆ.

"Then there is the newspaper press, that huge engine for keeping discussion on a low level, and making the political test final. To take off the taxes on knowledge was to place a heavy tax on broad and independent opinion. The multiplication of journals 'delivering brawling judgments unashamed on all things all day long,' has done much to deaden the small stock of individuality in public verdicts. It has done much to make vulgar ways of looking at things and vulgar ways of speaking of them stronger and stronger, by formulating and repeating and stereotyping

them incessantly from morning until afternoon, and from year's end to year's end. For, a newspaper must live; and to live it must please; and its conductors suppose, perh[illegible] not altogether rightly, that it can only pl[illegible] [illegible]y being very cheerful towards pr[illegible], very chilly to general theories, [illegible] [illegible]ul to the men of a principle..... It is, however, only too easy to understand how a journal, existing for a day, should limit its view to the possibilities of the day, and how, being most closely affected by the particular, it should coldly turn its back upon all that is general. And it is easy, too, to understand the reaction of this intellectual timorousness upon the minds of ordinary readers, who have too little natural force and too little cultivation to be able to resist the narrowing and deadly effect of the daily iteration of short-sighted commonplaces."—*On Compromise*, LORD MORLEY, pp. 32-34.

ಇದಕ್ಕೊಂದು ಉದಾಹರಣೆಯಾಗಿ ಅವರೇ ಒಂದು ಕಥೆ ಹೇಳಿದ್ದಾರೆ. ಅವರು "ಪೆಲ್ ಮೆಲ್ ಗೆಜೆಟ್" ಎಂಬ ಪತ್ರಿಕೆಯ ಸಂಪಾದಕರಾಗಿದ್ದಾಗ ಒಬ್ಬ ತರುಣನು ಅವರ ಬಳಿ ಹೋಗಿ ಉದ್ಯೋಗ ಬೇಕೆಂದು ಬೇಡಿದನಂತೆ. ಅವರು "ನಿನಗೆ ವಿಶೇಷ ಪ್ರತಿಭೆ ಪಾಂಡಿತ್ಯವಾವುದಾದರೂ ಉಂಟೋ?" ಎಂದು ಕೇಳಲಾಗಿ, ಆತನು "ಆಹಾ, ಉಂಟು; ನನಗೆ ಖಂಡನೆ ಮಾಡುವ ಪ್ರತಿಭೆ ಸಹಜವಾಗಿ ಬಂದಿದೆ ಎಂದು ತೋರುತ್ತದೆ" ಎಂದು ಹೇಳಿದನಂತೆ. ಅವರು ಅದಕ್ಕೆ ಪ್ರತಿಯಾಗಿ, "ಶಹಬಾಸ್! ಅದರಲ್ಲಿಯೂ ವಿಶೇಷ ಮಾರ್ಗವೇನಾದರೂ ಇರಬಹುದೋ?" ಎಂದು ಕೇಳಲು, ಆತನು "ಅದೇನೂ ಇಲ್ಲ; ಸರ್ವ ಸಾಮಾನ್ಯ ಖಂಡನೆ" ಎಂದು ಉತ್ತರ ಕೊಟ್ಟನಂತೆ. ಈ ತೆರದ ಖಂಡನಶಕ್ತಿಯೊಂದರಿಂದಲೇ ಪತ್ರಿಕೆಗೆ ದೊರೆಯಬೇಕಾದ ಪ್ರಶಸ್ತಿಯೆಲ್ಲವೂ ಎಂದಿಗೂ ದೊರೆಯಲಾರದು.

ಯಾವ ಅಧಿಕಾರಿಯನ್ನು ಅಥವಾ ರಾಜಕೀಯ ಪ್ರಮುಖನನ್ನು ಪತ್ರಿಕೆಯು ಖಂಡಿಸುತ್ತದೆಯೋ ಆತನು ಆ ಪ್ರಸಂಗ ವಿಷಯದಲ್ಲಿ ಆ

ಖಂಡಪ ಕರ್ತನಿಗಿಂತ ಹೆಚ್ಚು ತಿಳಿವಳಿಕೆಯುಳ್ಳವನಾಗಿದ್ದರೂ ಇರಬಹುದು. ಈ ಒಂದು ಸಂಭವವನ್ನು ಲೇಖಕನು ಮನಸ್ಸಿನಲ್ಲಿಟ್ಟುಕೊಂಡಿದ್ದರೆ ಅವನ ಲೇಖಣಿಯ ಓಟವು ಎಷ್ಟೋ ನಯವಾಗಿ, ಆ ಪತ್ರಿಕೆಗೆ ಎಷ್ಟೋ ಮರ್ಯಾದೆ ಉಳಿದೀತು—ಹೀಗೆಂದು ಮಾರ್ಲೆಯವರು ಹೇಳಿದ್ದಾರೆ. ಅದು ನ್ಯಾಯವೇ ಅಲ್ಲವೆ? ಪತ್ರಿಕೆಯ ಪಟ್ಟಿಗೆ ಸಿಕ್ಕಿದವರಲ್ಲಿಯೂ ಅದನ್ನು ಓದುವವರಲ್ಲಿಯೂ, ಅದನ್ನು ಬರೆಯುವವರಿಗಿಂತ ಜಾಣರೂ, ಅವರಿಗಿಂತ ಕಡಿಮೆಯಿಲ್ಲದೆ ದೇಶಹಿತವನ್ನು ಚಿಂತಿಸುವವರೂ ಎಷ್ಟೋ ಮಂದಿ ಇರಬಹುದಲ್ಲವೆ? ಈಗಿನ ಪ್ರಜಾ ರಾಜ್ಯಗಳನ್ನು ಕುರಿತು (Modern Democracies) ಪ್ರಸಿದ್ಧ ಗ್ರಂಥವೊಂದನ್ನು ಬರೆದವರಾಗಿ, ವ್ಯವಹಾರಶಾಸ್ತ್ರ ರಾಜ್ಯಶಾಸ್ತ್ರಗಳಲ್ಲಿ ಮಹಾಪಂಡಿತರೆನಿಸಿದ್ದ ಲಾರ್ಡ್ ಬ್ರೈಸ್ ಮಹಾಶಯರೂ ಪಾಶ್ಚಾತ್ಯ ದೇಶಗಳಲ್ಲಿ ವೃತ್ತಪತ್ರಿಕೆಗಳು ಪಾದ ವಿಘಾತಕ ಯಂತ್ರಗಳಾಗಿ ಪರಿಣಮಿಸಿವೆಯೆಂದು ಹೇಳಿದ್ದಾರೆ.

"If every newspaper did its best to ascertain and to tell the truth, and gave equal opportunities for the expression of all views, leaving the public to judge between those views, newspapers would be, so far as politics are concerned, an almost unmixed good. Everything that can be done would have been done to enable the formation of a sound and sober public opinion; and though the people would sometimes err, they would have only themselves to blame. This virtue is not to be looked for in such a world as the present. To demand it would be what theologians call a Counsel of Perfection. The people are pretty well served when a party paper reports events and speeches with fairness to both sides. Such a paper consults its own interests in doing so, for it is respected, and is more likely to be read, by members of the other party. The paper has, moreover, a sort of responsibility to its own party, which regards it as an asset, the value of whose advocacy is

reduced if it becomes intemperately reckless, or descends to personal abuse; for that may produce a reaction beneficial to the person assailed, who might relish attacks as a tribute to his importance. It is not invective that damages an antagonist, but the bringing up against him of his own errors in word or deed. Sensible men, a minority no doubt, but a minority which influences the rank and file, form their own opinion from the facts, little affected by newspaper praise or dispraise.''—*Modern Democracies*, LORD BRYCE, Vol. I, pp. 109–110.

ಜನರ ಬುದ್ಧಿ ಸ್ವಾತಂತ್ರ್ಯಕ್ಕಿರುವ ಈ ಅಪಾಯವು ನಮ್ಮ ದೇಶದಲ್ಲಿ ಹಬ್ಬಕೂಡದೆಂಬುದು ನನ್ನ ಅಭಿಲಾಷೆ.

## ವಾದ ವಿಧಾನ

ಸ್ವಾಭಾವಿಕವಾಗಿಯೇ ನಮ್ಮ ದೇಶದಲ್ಲಿ ಸ್ವತಂತ್ರ ವಿವೇಚನೆಯ ಅಭ್ಯಾಸವು ಕಡಿಮೆ. ಶಾಸ್ತ್ರದಲ್ಲಿ ಶ್ರದ್ಧೆ, ಗುರುವಚನದಲ್ಲಿ ವಿಶ್ವಾಸ, ರಾಜರಲ್ಲಿ ಭಕ್ತಿ, ರಾಜ್ಯಾಧಿಕಾರಿಗಳಲ್ಲಿ ವಿಧೇಯತೆ, ಪದವೀಧರರಲ್ಲಿ ವಿನಯ, ಬಂಧು ಮಿತ್ರರಲ್ಲಿ ದಾಕ್ಷಿಣ್ಯ, ಸಭಾ ಮಂಟಪದಲ್ಲಿ ಭಯ—ಈ ರೀತಿಯಾದುದು ನಮ್ಮವರ ಸಾಮಾನ್ಯ ಪದ್ಧತಿ. ಇಂಥವರಿಗೆ ಸ್ವತಂತ್ರ ವಿವೇಚನೆಯನ್ನು ಕಲಿಸುವುದು ಸುಲಭ ಸಾಧ್ಯವಲ್ಲ. ಇಷ್ಟರ ಜೊತೆಗೆ, ಈ ಕಾಲದಲ್ಲಿ ಹೊಸ ಹೊಸ ಕಕ್ಷಿಗಳೂ, ಹೊಸ ಹೊಸ ಮತಗಳೂ ಹುಟ್ಟಿಕೊಳ್ಳುತ್ತಿವೆ. ಇಂಥಾ ಸಮಯದಲ್ಲಿ ವೃತ್ತಪತ್ರಿಕೆಗಳವರು ಎಚ್ಚತ್ತಿದ್ದು ಜನಕ್ಕೆ ಎಚ್ಚರಿಕೆ ಕೊಡಬೇಕು. ''ಪ್ರಸಿದ್ಧರೊಬ್ಬರು ಹೀಗೆ ಹೇಳುತ್ತಾರೆ; ಅವರ ಗಂಟಲು ದೊಡ್ಡದು; ಆದ್ದರಿಂದ ನಾವೂ ಹಾಗೆಯೇ ಹೇಳೋಣ''—ಎಂದು ಜನರು ನಡೆಯುವುದನ್ನು ಪತ್ರಿಕೆಗಳು ತಪ್ಪಿಸಬೇಕು. ಜನರು ಹೇಗ ಬೇಕಾದರೂ ಹೇಳಲಿ, ಆದರೆ ವಿಚಾರಮಾಡಿ ಹೇಳಲಿ. ಜನರ ಮಾತು ವಿಧೇಯತೆಯಿಂದ ಹೊರಟದ್ದಾಗದೆ ವಿವೇಚನೆಯಿಂದ ಹೊರಟದ್ದಾಗಲಿ. ಜನರು ಯಾವ ಪಕ್ಷವನ್ನಾದರೂ ಹಿಡಿಯಲಿ, ಆದರೆ ಅದನ್ನು ಮೂಢ ಶ್ರದ್ಧೆಯಿಂದ ಹಿಡಿಯದೆ ಬುದ್ಧಿ

ಪೂರ್ವಕವಾಗಿ ಹಿಡಿಯಲಿ. ಹೀಗಾಗುವುದು ಕಷ್ಟ. ಇದನ್ನು ಸುಲಭಗೊಳಿಸುವುದು ಪತ್ರಿಕಾ ಲೇಖಕರ ಪ್ರಯತ್ನವಾಗಿರಬೇಕು. ಅವರು ತಮ್ಮ ಲೇಖನಗಳನ್ನು ಚರ್ಚಾ ಪ್ರಧಾನಗಳನ್ನಾಗಿ ಮಾಡಿ, ವಾದ ಮಾರ್ಗದಲ್ಲಿ ವಾಚಕರನ್ನು ನಡೆಯಿಸಿದರೆ, ನಮ್ಮ ಜನರಿಗೆ ಸ್ವಬುದ್ಧಿ ವಿಕಾಸದ ಮೂಲಕವೂ ಮೌಢ್ಯ ನಾಶನದ ಮೂಲಕವೂ ಆಗುವ ಉಪಕಾರವು ಅಷ್ಟಿಷ್ಟಲ್ಲ.

## ಧರ್ಮ ಸಂಕಟ

ನಾನು ಬೇಕೆಂದು ಪ್ರಾರ್ಥಿಸುತ್ತಿರುವ ವಿವೇಚನ ಕ್ರಮವು ಶುಷ್ಕ ತರ್ಕವಲ್ಲ, ವಿತಂಡಾವಾದವಲ್ಲ. ಅದು ಗಂಭೀರವೂ ಘನವೂ ವಿನಯಾನ್ವಿತವೂ ಆದ ಧರ್ಮಸೂಕ್ಷ್ಮಾನ್ವೇಷಣೆ. ಸತ್ಯವನ್ನೇ ಹೇಳಬೇಕು, ಧರ್ಮವನ್ನೇ ಮಾಡಬೇಕು—ಎಂದು ನಾವೆಲ್ಲರೂ ಸುಲಭವಾಗಿ ಹೇಳಿಬಿಡುತ್ತೇವೆ. ಆದರೆ ಸತ್ಯವನ್ನೂ ಧರ್ಮವನ್ನೂ ಕಂಡು ಹಿಡಿಯುವುದು ಸುಲಭವಲ್ಲ. ಅವು ಗೂಢವಾಗಿರುತ್ತವೆ—"ಧರ್ಮಸ್ಯ ತತ್ತ್ವಂ ನಿಹಿತಂ ಗುಹಾಯಾಂ"—ಎಂದು ಪೂರ್ವಿಕರೇ ಹೇಳಿದ್ದಾರೆ. ಅವುಗಳನ್ನು ಹುಡುಕುವುದಕ್ಕೆ ನಮಗಿರುವ ಬೆಳಕು ಒಂದೇ. ಅದು ಮನುಷ್ಯನ ಬುದ್ಧಿ ವ್ಯಾಪಾರದಿಂದ—ಎಂದರೆ ಚರ್ಚೆ, ವಿಮರ್ಶೆ, ವಿವೇಚನೆಗಳ ಮೂಲಕ—ದೊರೆಯತಕ್ಕುದು. ಮಾನವರ ವ್ಯಾಪಾರಗಳಲ್ಲಿಯೂ ವಿವಾದಗಳಲ್ಲಿಯೂ ಸುಳ್ಳೆಲ್ಲವೂ ಒಂದು ಕಡೆ, ದಿಟವೆಲ್ಲವೂ ಇನ್ನೊಂದು ಕಡೆ ಇರುವುದಿಲ್ಲ; ನ್ಯಾಯವೆಲ್ಲವೂ ಒಂದು ಕಡೆ, ಅನ್ಯಾಯವೆಲ್ಲವೂ ಇನ್ನೊಂದು ಕಡೆ ಇರುವುದಿಲ್ಲ. ಪಾಯಸದಲ್ಲಿ ಹಾಲೂ ನೀರೂ ಬೆರೆತಿರುವಂತೆ, ಸಂಜೆಯಲ್ಲಿ ಹಗಲೂ ಇರುಳೂ ಸೇರಿರುವಂತೆ, ಜಗತ್ತಿನಲ್ಲಿ ಸತ್ಯಮಿಥ್ಯೆಗಳೂ ಧರ್ಮಾಧರ್ಮಗಳೂ ಮಿಶ್ರವಾಗಿರುತ್ತವೆ. ಈ ಮಿಶ್ರಣವನ್ನು ಬೇರೆಯಾಗಿಸಿ, ತತ್ತ್ವವನ್ನು ಹಿಡಿಯುವುದಕ್ಕೆ ಬಹು ಬುದ್ಧಿಗಳ ಸಂಘರ್ಷಣೆಯಿಂದ ಹುಟ್ಟಿ ನಡೆಯುವ ಚರ್ಚೆಯೊಂದೇ ಅವರಿಗಿರುವ ಸಾಧನೆ. ಇನ್ನು ಮುಂದೆ ರಾಷ್ಟ್ರಾಧಿಕಾರವನ್ನು ಪ್ರಜೆಗಳೇ ನಡೆಯಿಸಬೇಕಾಗಿರುವ ಕಾರಣ, ಅವರಿಗೆ ಈ ಚರ್ಚಾ

ಪದ್ಧತಿಯು—ಎಂದರೆ ಸ್ವತಂತ್ರ ವಿಚಾರ ಪದ್ಧತಿಯು—ಅಭ್ಯಾಸವಾಗ ಬೇಕು. ಈ ಅಭ್ಯಾಸವನ್ನು ಮಾಡಿಸಿಕೊಡುವ ಜವಾಬ್ದಾರಿಯು ಪತ್ರಿಕೆಗಳದು. ಪ್ರಜಾ ರಾಜ್ಯವೆಂಬುದು ಶತ್ರುಗಳಿಲ್ಲದ ರಾಜ್ಯವೇನೂ ಅಲ್ಲ. ಬಾಹ್ಯ ಶತ್ರುಗಳ ಮಾತು ಹಾಗಿರಲಿ; ಅದಕ್ಕೆ ಅಂತಶ್ಶತ್ರು ಗಳೂ ಪ್ರಬಲರಾದವರಿರುವರು. ಅವರಲ್ಲಿ ಮುಖ್ಯರಾದವರು ಪ್ರಜಾ ಕ್ಷೋಭಕರಾದ ಲೇಖಕರು ಮತ್ತು ಭಾಷಕರು (Demagogues). ಯದ್ವಾ ತದ್ವಾ ಮಾತನಾಡಿ, ಅಥವಾ ಬರೆದು, ಜನರ ವಿವೇಚನ ಶಕ್ತಿಗೆ ಮೂರ್ಛೆ ತಂದು, ಅವರ ಮನಸ್ಸನ್ನು ರೋಷಾವೇಶ ಹಠಗಳಲ್ಲಿ ನಿಲ್ಲಿಸು ವವರು ಪ್ರಜಾಧಿಪತ್ಯಕ್ಕೆ ಕಂಟಕಪ್ರಾಯರಾಗುವರು. ನಾವೆಲ್ಲ ನಮ್ಮ ದೇಶಕ್ಕಾಗಿ ಬಯಸುತ್ತಿರುವುದು ಪ್ರಜಾ ರಾಜ್ಯ, ಪತ್ರಿಕಾಕರ್ತ ರಾಜ್ಯ ವಲ್ಲ. ಪತ್ರಿಕೆಯೆಂಬುದು ಪವಿತ್ರ ವಸ್ತುವೇ ನಿಜ; ಅದು ದೊಡ್ಡದೇ ನಿಜ. ಆದರೆ ಅದಕ್ಕಿಂತ ಪವಿತ್ರವೂ ದೊಡ್ಡದೂ ಆದದ್ದು ಒಂದಿದೆ. ಅದು ದೇಶ, ಅಥವಾ ಪ್ರಜಾ ಸಮುದಾಯ. ಈ ಪ್ರಜೆಯ ಹಿತ ಸಾಧನೆಗೆ ಪತ್ರಿಕೆ ಒಂದು ಆಯುಧ ಮಾತ್ರವಾಗಿದೆ. ಆಯುಧವು ಯಜಮಾನನಿಗೆ ಮೈ ಮರೆಯಿಸಬಾರದು. ಇಂಥ ದುಸ್ಸಂಧಿ ಈಗ ಯೂರೋಪ್ ಅಮೆರಿಕಗಳಲ್ಲಿ ನಡೆಯುತ್ತಿದೆ. ನಮ್ಮ ದೇಶದಲ್ಲಿ ಅದಾಗದೆ ಇರಲೆಂಬ ಆಶೆಯಿಂದ ನಾನು ಇಷ್ಟು ದೂರ ಈ ವಿಚಾರ ವನ್ನು ಬೆಳೆಸಬೇಕಾಯಿತು. ತಾವು ಕ್ಷಮಿಸುವಿರೆಂದು ನಂಬಿದ್ದೇನೆ.

## ಪತ್ರ ವ್ಯವಹಾರ

ವೃತ್ತಪತ್ರಿಕೆಯ ವಾದ ಕ್ಷೇತ್ರದಲ್ಲಿ ಮುಖ್ಯವಾದ ಮತ್ತೊಂದು ವಿಭಾಗವು ಪತ್ರ ವ್ಯವಹಾರದ್ದು. ನಮ್ಮ ದೇಶದಲ್ಲಿ ಇದರ ಉಪಯೋ ಗವು ಇನ್ನೂ ಬೆಳೆದಿಲ್ಲ. ಸಂಪಾದಕರ ಗಮನಕ್ಕೆ ಬಾರದಿರುವ ಅನೇಕ ವಿಚಾರಗಳೂ, ಜನರ ಅನಾನುಕೂಲ ಕೊರತೆಗಳೂ, ಸಾಮಾಜಿಕ ಸಮಸ್ಯೆ ಗಳೂ ಈ ವಿಭಾಗದಲ್ಲಿ ಇತರರಿಂದ ಚರ್ಚೆಯಾಗಬೇಕು. ಇಂಗ್ಲೆಂಡಿನ "ಟೈಮ್ಸ್" ಮೊದಲಾದ ಪ್ರಸಿದ್ಧ ಪತ್ರಿಕೆಗಳಲ್ಲಿ ಈ ವಿಭಾಗವೇ ಬಹು ಸ್ವಾರಸ್ಯವುಳ್ಳದಾಗಿರುತ್ತದೆ. ಇದು ಪ್ರಜಾ ಪ್ರಮುಖರ ಆದರ

ಸಹಕಾರಗಳಿಲ್ಲದೆ ಆಗದು. ನಮ್ಮ ಪತ್ರಿಕಾ ಚಾಲಕರು ತಮಗೆ ತಿಳಿದ ಪ್ರಮುಖ ಜನರನ್ನು ಪ್ರೋತ್ಸಾಹಿಸಿ, ವಾರಕ್ಕೆರಡು ಮೂರು ಪತ್ರ ಗಳನ್ನಾದರೂ ಅವರು ಕಳುಹಿಸುವಂತೆ ಮಾಡಿಕೊಂಡರೆ, ಪತ್ರಿಕೆಗಳ ಸ್ವಾರಸ್ಯವೂ ಉಪಯೋಗವೂ ಎರಡೂ ಹೆಚ್ಚೀತು.

## ಸನಾಮಧೇಯತೆ

ಈ ಸಂದರ್ಭದಲ್ಲಿ ಒಂದು ಸೂಚನೆ ಮಾಡಬೇಕಾಗಿದೆ. ಲೇಖಕರು ಸಾಮಾನ್ಯವಾಗಿ ತಮ್ಮ ನಿಜವಾದ ಹೆಸರಿನಿಂದಲೇ ರುಜು ಹಾಕು ವಂತೆ ಮಾಡುವುದು ಒಳ್ಳೆಯದೆಂದು ನನ್ನ ಅಭಿಪ್ರಾಯ. ಹಾಗೆ ಸನಾಮಧೇಯವಾಗಿರುವ ಲೇಖನವು ಜವಾಬ್ದಾರಿಯುಳ್ಳುದಾಗಿರುವು ದಲ್ಲದೆ, ಇತರರಿಗೆ ಬರೆಯಲು ಧೈರ್ಯವನ್ನೂ ಪ್ರೋತ್ಸಾಹವನ್ನೂ ಕೊಡುವುದು. ನಾಮರಹಿತತೆಯೂ ಕೃತ್ರಿಮನಾಮವೂ ಲೇಖನದ ತೂಕ ಬೆಲೆಗಳನ್ನು ತಗ್ಗಿಸುತ್ತವೆ. ಆದರೆ ವಿಶೇಷ ಸಂದರ್ಭಗಳಿಗೆ ಈ ಮಾತು ಅನ್ವಯಿಸಲಾರದು. ಕೆಲವು ಅಸಾಧಾರಣ ಕಾರಣಗಳಿಗಾಗಿ ಒಂದೊಂದು ವೇಳೆ ಲೇಖಕನು ತನ್ನ ಹೆಸರನ್ನು ಬಚ್ಚಿಡಬೇಕಾಗ ಬಹುದು. ಆದರೆ ಸಾಮಾನ್ಯವಾಗಿ ಸನಾಮವಾಗಿರುವ ಬರವಣಿಗೆಯೇ ಉತ್ತಮ. ಅದೇ ಹೆಚ್ಚು ಪ್ರಮಾಣವಾಗತಕ್ಕುದು.

## ಹಾಸ್ಯರಸ

ಈಚೆಗೆ ಹಾಸ್ಯವನ್ನುದ್ದೇಶವಾಗಿಟ್ಟುಕೊಂಡು ವಿಚಿತ್ರವಾಗಿ ಕಾಣುವ ಕೃತಕನಾಮಗಳಿಂದ ಕೆಲವರು ಪತ್ರಿಕೆಗಳಲ್ಲಿ ಬರೆಯಹೊರ ಟಿರುವರು. ಹಾಸ್ಯ ವಿನೋದಗಳನ್ನು ಯಾರೂ ಬೇಡವೆನ್ನುವುದಿಲ್ಲ. ಆದರೆ ಗಂಭೀರವಾಗಿಯೂ, ನಿಷ್ಠುರ ಕಾಠಿಣ್ಯ ಮಾತ್ಸರ್ಯಗಳಿಲ್ಲದೆಯೂ ಇರುವ ಮೃದು ಹಾಸ್ಯವು ಸುಲಭವಲ್ಲ. ಇಂಗ್ಲಿಷ್ ಜನರಿಗೆ ಅದು ಸ್ವಾಭಾವಿಕವಾಗಿ ಬಂದಿರುವಂತೆ ಕಾಣುತ್ತದೆ. ಅವರ "ಪಂಚ್" ಮೊದಲಾದ ಪತ್ರಿಕೆಗಳು ಹಾಸ್ಯರಸ ಪ್ರಧಾನವಾಗಿರುತ್ತವೆ. ಆದರೆ ಅವು ಯಾರ ಗೌರವಕ್ಕೂ ಭಂಗತರುವಂತಿರುವುದಿಲ್ಲ. ನಮ್ಮಲ್ಲಿ ಅಂಥಾ ಹಾಸ್ಯವು ವಿರಳ: ಅದನ್ನು ಒದಗಿಸುವ ಪ್ರಯತ್ನದಲ್ಲಿ ಅಶ್ಲೀಲವಾಗು

ವುದೂ ಅಮರ್ಯಾದೆಯಾಗುವುದೂ ಉಂಟು. ಈ ಭಾಗದಲ್ಲಿ ಚಾಲಕರು ಜಾಗರೂಕರಾಗಿರಬೇಕೆಂದು ತೋರುತ್ತದೆ. ಪತ್ರಿಕೆಗೆ ಮೊದಲು ಬೇಕಾದುದು ಗೌರವ. ಅದು ಲೇಖನಗಳ ಗಾಂಭೀರ್ಯ ಪ್ರಾಮಾಣಿಕತೆಗಳಿಂದ ಉಂಟಾಗಬೇಕು. ಈ ಗುಣಗಳ ಪಕ್ಕದಲ್ಲಿ ಮೃದು ಮಧುರವಾದ ಲಘುಹಾಸ್ಯವಿದ್ದರೆ ಪತ್ರಿಕೆಯು ಮತ್ತಷ್ಟು ರುಚಿಸುವುದು ನಿಜ. ಆ ಗುಣಗಳನ್ನು ಮರೆತು ಅವಕ್ಕೆ ಪ್ರತಿಯಾಗಿ ಪರಿಹಾಸ್ಯವನ್ನೇ ತುಂಬುವೆವೆಂದರೆ, ಪ್ರಧಾನಿಯ ಪದವಿಯಲ್ಲಿ ಕುಳಿತವನು ವಿದೂಷಕನ ಕೆಲಸವನ್ನು ಮಾಡಿದಂತೆ ಆದೀತು.

## ವಿಮರ್ಶೆಯ ನೀತಿ

ಸರಕಾರದ ಉದ್ದೇಶ ಕಾರ್ಯರೀತಿಗಳನ್ನು ಪರಿಶೀಲಿಸಿ, ಕಂಡು ಬಂದ ನ್ಯೂನಾತಿರೇಕಗಳನ್ನು ಬಯಲಿಗೆ ಹಾಕುವುದೂ, ಅಧಿಕಾರಿಗಳ ದುರ್ವರ್ತನೆಯೇನಾದರೂ ಇದ್ದರೆ ಅದನ್ನು ತೋರಿಸಿಕೊಡುವುದೂ ಪತ್ರಿಕೆಗಳ ಮುಖ್ಯ ಕರ್ತವ್ಯಗಳಲ್ಲಿ ಒಂದೆಂಬುದನ್ನು ಎಲ್ಲರೂ ಒಪ್ಪುವರು. ಆದರೆ ಈ ದೋಷೋದ್ಘಾಟನೆಯ ರೀತಿಯಲ್ಲಿ ಗಾಂಭೀರ್ಯವೂ ಮರ್ಯಾದೆಯೂ ಬಿಟ್ಟುಹೋಗಬಾರದಲ್ಲವೆ? ವೈಯುಕ್ತಿಕ ನಿಂದೆ, ಅಂತರಂಗ ಜೀವನ ದೂಷಣೆ, ದುರೂಹಾಮೂಲವಾದ ವ್ಯಾಖ್ಯಾನ —ಇವು ಪತ್ರಿಕೆಯ ಘನತೆಗೆ ಭಂಗತರುವುದೇ ಅಲ್ಲದೆ, ಸಾರ್ವಜನಿಕ ಪ್ರಸಂಗದ ಅಂತಸ್ತನ್ನು ಕೆಳಕ್ಕಿಳಿಸುತ್ತವೆ. ನಮ್ಮ ಬರೆವಣಿಗೆಯು ಎಷ್ಟೆಷ್ಟು ತೂಕವುಳ್ಳದೂ, ಸಪ್ರಮಾಣವಾದುದೂ, ಆರಿಸಿದ ಮಾತುಗಳುಳ್ಳದೂ ಆಗಿರುವುದೋ ಅದರ ಪ್ರಭಾವವು ಅಷ್ಟಷ್ಟು ಹೆಚ್ಚಾಗಿರುವುದು. ಆಕ್ಷೇಪಣೆಮಾಡಿ ನೋವನ್ನುಂಟುಮಾಡುವುದು ಕಷ್ಟವಲ್ಲ; ಆಕ್ಷೇಪಣೆಗೆ ಸಿಕ್ಕಿದವನು ತನ್ನ ಮನಸ್ಸಿನೊಳಗಾದರೂ "ಈ ಆಕ್ಷೇಪಣೆಯಲ್ಲಿ ಸ್ವಲ್ಪ ಗುಣವಿದೆ" ಎಂದು ಅಂದುಕೊಳ್ಳುವಹಾಗೆ ಮಾಡುವುದು ಕಷ್ಟ. ನಮ್ಮ ಪ್ರಹಾರಕ್ಕೆ ಸಿಕ್ಕಿದವನು ಆಕ್ಷಣ ನಮ್ಮ ವಿಷಯದಲ್ಲಿ ಹೊರಗೆ ಕೋಪವನ್ನು ತೋರಿದರೂ, ಆಮೇಲಾದರೂ ಒಳಗೆ ಗೌರವ ತೋರುವಂತೆ ಇರಬೇಕು. ಇದಕ್ಕೆ ಆಕ್ಷೇಪಣೆಯ ಒಳಗಿರುವ ಸತ್ಯಾಂಶ,

—ಅದರ ನಿಷ್ಪಕ್ಷಪಾತತೆ,—ಅದರ ರೀತಿ,—ಅದರ ಧ್ವನಿ—ಇವು ಕಾರಣ. ಪುನಃಪುನಃ ನಾನು ಕೇಳಿಕೊಳ್ಳತಕ್ಕ ಗುಣವಾವುದೆಂದರೆ ಘನತೆ, ಗಾಂಭೀರ್ಯ, ಮರ್ಯಾದೆ, ದೊಡ್ಡತರಹ, ಜವಾಬ್ದಾರೀ ಬುದ್ಧಿ.

## ಇಲಿಯಿದ್ದರೆ ಹುಲಿಯೆನ್ನುವುದು

ಲೇಖನಗಳಿಗೆ ವಿಷಯಗಳನ್ನಾರಿಸುವಾಗ ಅವುಗಳ ಮುಖ್ಯಾಮುಖ್ಯತೆಗಳ ತಾರತಮ್ಯವನ್ನು ಮರೆಯಬಾರದು. ಸಾಮಾನ್ಯವಾಗಿ ಸಣ್ಣ ಸಣ್ಣ ವಿಷಯಗಳನ್ನು ಪದೇ ಪದೇ ಎತ್ತುತ್ತಿರುವುದು ಪ್ರಯೋಜನಕರವಲ್ಲ. ದೇಹವನ್ನು ಎಷ್ಟೇ ತೊಳೆದರೂ ಕೊಳೆ ಸ್ವಲ್ಪ ಇದ್ದೇ ಇರುವ ಹಾಗೆ, ಮಾನವ ಸಂಸ್ಥೆಗಳಲ್ಲಿ ಎಷ್ಟು ಪರಿಷ್ಕಾರಮಾಡಿದರೂ ಸ್ವಲ್ಪದೋಷಗಳು ಉಳಿದೇ ಇರುತ್ತವೆ. ಅವುಗಳನ್ನು ಸರಿಪಡಿಸಬೇಕೆಂಬ ಆತುರದಲ್ಲಿ ದೊಡ್ಡ ದೊಡ್ಡ ವಿಷಯಗಳನ್ನು ಮರೆಯಬಾರದು. ಬ್ರಿಟಿಷ್ ಕರ್ಣಾಟಕದವರು ಏಕೀಕರಣ, ವಿಶ್ವವಿದ್ಯಾಲಯ, ಸ್ವರಾಜ್ಯ, ಖಾದೀ ಪ್ರಚಾರ—ಈ ಮಹೋದ್ಯಮಗಳಿಗೆ ಮನಸ್ಸು ತೆತ್ತಿರುವುದರಿಂದ, ಅವರ ಪತ್ರಿಕೆಗಳು ಈ ವಿಶಾಲ ಪ್ರಸಂಗಗಳಲ್ಲಿ ಮಗ್ನವಾಗಿ, ಅಲ್ಪ ವಿಚಾರಗಳಿಗೆ ಅಷ್ಟಾಗಿ ಕೈಹಾಕುತ್ತಿಲ್ಲ. ಇದು ಮಹೋದ್ದೇಶದೀಕ್ಷೆಯಿಂದ ಆಗತಕ್ಕ ಉಪಕಾರ. ಪತ್ರಿಕೆಗಳು " ಸ್ಟಂಟ್ " ಎಂದರೆ ಬೇಕುಬೇಕಾಗಿ ರಗಳೆಯೆಬ್ಬಿಸುವ ಅಥವಾ ಉತಾವಣೆ ಎತ್ತುವ ಪದ್ಧತಿಯು ಅನುಚಿತವೆಂದೂ, ಅದನ್ನು ನಿರೋಧಿಸಲು ಪ್ರಯತ್ನಗಳು ನಡೆಯಬೇಕೆಂದೂ ಬ್ರಿಟಿಷ್ ಇನ್‌ಸ್ಟಿಟ್ಯೂಟಿನ ಮೆಂಬರುಗಳು ಆಲೋಚಿಸುತ್ತಿದ್ದಾರೆ.

The meeting of the Council of the Institute of Journalists held at Portsmouth on 11th June, 1927, considered the following resolution sent by the Birmingham and Midland District, and moved by Mr. H. J. Whittick: "That this meeting deplores the creation of an appetite for newspaper " stunts", and the increasing disposition to pander to it, whatever distortion or exaggeration of facts may be involved. The members earnestly protest against the

degradation of journalism and journalists by the pursuit of such "stunts", often in circumstances that outrage the decencies that the Press should uphold, and at the cost of the honour and personal dignity of its representatives. The meeting desires to accord the gratitude of the members of the District to the proprietors and staffs of those newspapers which, by resolute adherence to sound and honourable methods, are endeavouring to maintain the good name of British Journalism."—*Journal of the Institute of Journalists*, Vol. XV, No. 131, June, 1927.

## ಶ್ರಮಕ್ಕೆ ಬೆಲೆ

ಸರಕಾರದ ಆಡಳಿತಗಳನ್ನು ವಿಮರ್ಶೆಮಾಡಿ ತಿದ್ದುಪಾಟುಗಳನ್ನು ಸೂಚಿಸುವುದು ಪತ್ರಿಕೆಗಳ ಅತಿ ಮುಖ್ಯ ಕರ್ತವ್ಯವೆಂಬುದನ್ನು ಆಗಲೇ ಹೇಳಿದ್ದಾಯಿತು. ನಮ್ಮ ಪತ್ರಿಕೆಗಳಲ್ಲಿ ಈ ಬಗೆಯ ಲೇಖನವು ಇನ್ನೂ ಉತ್ತಮಗೊಳ್ಳಬೇಕಾಗಿದೆ. ಈ ಲೇಖನಗಳಲ್ಲಿ ಅಲಂಕಾರ ಆವೇಶ ಗಳಿಗಿಂತ, ವಾಸ್ತವಾಂಶಗಳೂ ಲೆಕ್ಕ ಉದಾಹರಣೆಗಳೂ ಹೆಚ್ಚಾಗಿರ ಬೇಕು. ಬರೆಯುತಕ್ಕವರು ಬೇರೆಬೇರೆ ಇಲಾಖೆಗಳಿಗೆ ವಿಧಾಯಕವಾಗಿ ರುವ ಉದ್ದೇಶಗಳನ್ನೂ ಕಾರ್ಯ ಕ್ರಮಗಳನ್ನೂ ಮುಂದಿಟ್ಟುಮಾಡಿ ಕೊಂಡು, ಹಿಂದಿನ ವರ್ಷಗಳ ವರದಿಗಳನ್ನೂ ಇತರ ಪ್ರಾಂತಗಳ ವರದಿ ಗಳನ್ನೂ ಪರೀಕ್ಷಿಸಿ ಹೋಲಿಸಿ ನೋಡಿ, ಸೂಕ್ಷ್ಮಾಂಶಗಳನ್ನು ಗಮನಕ್ಕೆ ತರಬೇಕು. ಈ ತೆರದ ಬರೆವಣಿಗೆಯು ಶ್ರಮಸಾಧ್ಯ ವಾದುದು. ಆದರೆ ಅವಕ್ಕೆ ದೊರೆಯುವಷ್ಟು ಬೆಲೆಯು ಊಹೆ ಅನುಮಾನ ಗಳಮೇಲೆ ಹೊರಟ ಆವೇಶೋದ್ಗಾರಗಳಿಗೆ ಎಂದಿಗೂ ದೊರೆಯಲಾರದು. ಹಿಂದೆ ಗೋಖಲೆಯವರೂ, "ಹಿಂದೂ" ಪತ್ರಿಕೆಯ ಜಿ. ಸುಬ್ರಹ್ಮಣ್ಯ ಯ್ಯರ್ ಅವರೂ ಈ ತೆರದ ಸರಕಾರೀ ಕಾರ್ಯ ವಿಮರ್ಶೆಗಳನ್ನು ಬರೆಯು ತ್ತಿದ್ದರು. ಈಚೆಗೆ ಏಕೋ ಆ ಬಗೆಯ ಕಷ್ಟಸಿದ್ಧವಾದ ವಿಮರ್ಶನ ಕ್ರಮವು ಇಂಡಿಯಾ ದೇಶದ ಇತರ ಭಾಗಗಳಲ್ಲಿಯೂ ಕಡಿಮೆಯಾಗು ತ್ತಿದೆ. ಇದು ಶೋಚನೀಯವಾದ ವಿಷಯ. ನಾನಾ ಇಲಾಖೆಗಳ

…ರ್ಯ ವಿಧಾನಗಳನ್ನೂ ಮರ್ಮಗಳನ್ನೂ ಚೆನ್ನಾಗಿ ಪರೀಕ್ಷಿಸಿದ ಹೊರತು ಆಡಳಿತದ ನಿಜವಾದ ಸ್ವಭಾವವು ನಮಗೆ ತಿಳಿದುಬರುವುದಿಲ್ಲ. ರಾಜ್ಯ ವಿಚಾರಕರ್ತರು ಅದರ ಸ್ವಭಾವವನ್ನು ತಾವು ತಿಳಿದುಕೊಂಡು ಜನರಿಗೆ ತಿಳುಹಿಸಿಕೊಟ್ಟ ಹೊರತು ರಾಜಕೀಯ ಸಂಸ್ಕಾರಗಳು ಸರಿಯಾಗಿ ನಡೆಯಲಾರವು. ಮೇಲೆ ಹೇಳಿದಂತೆ ವರದಿಗಳ ಆಧಾರದ ಮೇಲೆ, ಅಂಕಿ ಪ್ರಮಾಣ ಉದಾಹರಣೆಗಳ ಸಮೇತವಾಗಿ ಇರತಕ್ಕ ವಿಮರ್ಶೆಯು ವಾಚಕರಿಗೆ ಒಂದು ಬಗೆಯ ವಿದ್ಯಾಭ್ಯಾಸವನ್ನು ಮಾಡಿಸುವುದಲ್ಲದೆ, ಲೇಖಕನಿಗೂ ಒಂದು ತೆರದ ವಿದ್ಯಾಭ್ಯಾಸವಾಗುವುದು.

## (೩) ವಿದ್ಯಾಪ್ರಚಾರ ಭಾಗ

ಇನ್ನು ವೃತ್ತಪತ್ರಿಕೆಯ ವಿಶೇಷ ವಿಷಯ ಭಾಗವನ್ನು ನೋಡೋಣ. ಇದು ವಿದ್ಯಾ ಪ್ರಚಾರ ಭೂಮಿ. ದೇಶದ ವಿದ್ವಾಂಸರೂ ಶಾಸ್ತ್ರಜ್ಞರೂ ವಿವಿಧ ಕಲಾ ನಿಪುಣರೂ ಬಗೆ ಬಗೆಯ ವೃತ್ತಿ ವ್ಯಾಪಾರಗಳ ಅನುಭವವುಳ್ಳವರೂ ಈ ಭಾಗದಲ್ಲಿ ವ್ಯಾಸಗಳನ್ನು ಬರೆದು ಸಾಮಾನ್ಯಜನರ ಜ್ಞಾನವನ್ನೂ ವಿಚಾರ ಕೌಶಲವನ್ನೂ ವೃದ್ಧಿಪಡಿಸಬೇಕು. ಇಂಥಾ ವಿಶೇಷ ಭಾಗವು ಇಂಗ್ಲಿಷ್ ಪತ್ರಿಕೆಗಳಲ್ಲಿ ಯಾವಾಗಲೂ ಇರುತ್ತದೆ. ನಮ್ಮ ಪತ್ರಿಕೆಗಳಲ್ಲಿ ಅದು ಇಲ್ಲವೆಂದೇ ಹೇಳಬಹುದು. ಇದು ದೊಡ್ಡ ಕೊರತೆ. ಏಕೆಂದರೆ, ಸ್ವಲ್ಪ ಮಟ್ಟಿಗಾದರೂ ಸಾಹಿತ್ಯ ಪರಿಚಯ ಶಾಸ್ತ್ರ ಪರಿಚಯಗಳಿಲ್ಲದೆ ಇರುವ ಜನರು ರಾಜಕೀಯ ವಿಷಯ ವಿಮರ್ಶೆಗೂ ರಾಜ್ಯಾಧಿಕಾರಕ್ಕೂ ತಕ್ಕಷ್ಟು ಮಟ್ಟಿಗೆ ಅರ್ಹರಾಗಲಾರರು ? ಇದುವರೆಗೂ ನಮ್ಮ ದೇಶದಲ್ಲಿ ಪ್ರಜೆಗಳನ್ನು ನಿದ್ರೆಯಿಂದ ಎಬ್ಬಿಸಿ ನಿಲ್ಲಿಸುವುದೇ ಪತ್ರಿಕೆಗಳ ಮುಖ್ಯ ಕಾರ್ಯವಾಗಿತ್ತು. ಈಗ ಅವರು ತಕ್ಕಮಟ್ಟಿಗೆ ಎಚ್ಚರಗೊಂಡಿದ್ದಾರೆ. ಇನ್ನು ಅವರಿಗೆ ತಿಳಿವಳಿಕೆಯನ್ನುಂಟುಮಾಡುವುದೇ ಮುಖ್ಯ ಕಾರ್ಯ. ಇದನ್ನು ಮಾಡದಿದ್ದರೆ ಅವರು ಎಚ್ಚೆತ್ತುದು ಅನರ್ಥಕಾರಿಯಾದೀತು. ತಿಳಿವಿಲ್ಲದವನು ಕತ್ತಿ ಹಿಡಿದು ಹೊರಡುವುದಕ್ಕಿಂತ ನಿದ್ದೆ ಮಾಡುತ್ತಿರುವುದೇ ಲೇಸಲ್ಲವೆ ? ಈ ಪ್ರಜಾಬೋಧೆಯ ಕಾರ್ಯವು ಈಗ ಅನೇಕ ಮುಖ

ವಾಗಿ ನಡೆಯಬೇಕು. ಅದಕ್ಕೆ ಈಗಿನ ನಾನಾ ಶಾಸ್ತ್ರಗಳನ್ನೂ ಆವಿಷ್ಕಾರಂಭಗಳನ್ನೂ ಬಲ್ಲವರು ದೇಶಭಾಷೆಯಲ್ಲಿ ಬರೆದು ಜ್ಞಾನದಾನ ಮಾಡಲು ಸಿದ್ಧರಾಗಬೇಕು. ಇಂಥವರ ಸಂಖ್ಯೆ ಈಗ ಅತಿ ಸ್ವಲ್ಪವಾಗಿದೆ. ಅದನ್ನು ಹೆಚ್ಚಿಸುವುದು ಹೇಗೆ? ಲೇಖಕರಿಗೆ ಪಾರಿತೋಷಿಕಗಳನ್ನು ಕೊಡುವುದು ಒಂದು ಉಪಾಯ. ಇದು ದ್ರವ್ಯ ಸಾಧ್ಯವಾದದ್ದು.

## ಪೆನ್‌ಷನ್‌ದಾರರೇಕೆ ಬರೆಯಬಾರದು?

ಇನ್ನೊಂದು ಮಾರ್ಗವಾವುದೆಂದರೆ — ನಮ್ಮಲ್ಲಿ ಸರಕಾರದ ಉದ್ಯೋಗವನ್ನು ಮಾಡಿ ಲೋಕಾನುಭವವನ್ನು ಸಂಪಾದಿಸಿ ವಿಶ್ರಾಂತರಾಗಿ ಪೆನ್‌ಷನ್ ತೆಗೆದುಕೊಳ್ಳುತ್ತಿರುವ ದೊಡ್ಡಮನುಷ್ಯರ ಸಹಾಯವನ್ನು ಸಂಪಾದಿಸುವುದು. ಇದು ಸುಲಭವೆಂದೂ ನಾನು ತಿಳಿದಿಲ್ಲ. ಕಾಲು ಚಾಚಿಕೊಂಡು ಹಾಯಾಗಿ ಕುಳಿತಿರೋಣವೆಂದು ಪೆನ್‌ಷನ್‌ದಾರರು ಅಂದುಕೊಂಡು, ಮಂಕಾಗಿ ಕಾಲ ತಳ್ಳುವುದು ನಮ್ಮ ದೇಶದಲ್ಲಿ ವಾಡಿಕೆಯಾಗಿದೆ. ಆ ಬಗೆಯ ಜೀವನವು ಅವರಿಗೇ ಹಾನಿಕರವೆಂದೂ, ಕೈಲಾದಷ್ಟು ಜ್ಞಾನದಾನವನ್ನಾದರೂ ಮಾಡುವುದು ದೇಶವಿಷಯದಲ್ಲಿ ಅವರ ಕರ್ತವ್ಯವೆಂದೂ ಯಾರಾದರೂ ಅವರಿಗೆ ಅನುನಯವಚನಗಳಿಂದ ಹೇಳಿ ಅವರನ್ನೊಡಂಬಡಿಸಿದರೆ, ಅವರು ಕೆಲವು ಒಳ್ಳೊಳ್ಳೆಯ ಕಥೆಗಳನ್ನು ಹೇಳಿಯಾರು, ಅಥವಾ ಉಪಯುಕ್ತ ವಿಷಯಗಳನ್ನು ವಿವರಿಸಿಯಾರು. ಪ್ರಯತ್ನಪಟ್ಟು ಈ ತೆರದ ಸಹಾಯವನ್ನು ನಮ್ಮ ಪತ್ರಿಕಾ ಚಾಲಕರು ಸಂಪಾದಿಸಬೇಕು.

## ಪ್ರಮುಖಜನರೇಕೆ ಬರೆಯಬಾರದು?

ನಮ್ಮ ಪ್ರಸಿದ್ಧ ವಕೀಲರುಗಳೂ, ಶಾಸನಸಭಾ ಸದಸ್ಯರುಗಳೂ, ಮ್ಯುನಿಸಿಪಲ್ ಮೆಂಬರುಗಳೂ, ಕಾಂಗ್ರೆಸ್ ಮುಖಂಡರುಗಳೂ ಪತ್ರಿಕೆಗಳಲ್ಲಿ ಏಕೆ ಬರೆಯುವುದಿಲ್ಲ? ಚುನಾವಣೆಯ ಕಾಲದಲ್ಲಿ ಇವರಿಗೆ ಪತ್ರಿಕೆಗಳ ಸಹಾಯ ಬೇಕಾಗುತ್ತದೆ. ಇವರು ಉಪನ್ಯಾಸಗಳನ್ನು ಕೊಟ್ಟಾಗ ಅವು ಸೇವೆ ಸಲ್ಲಿಸದಿದ್ದರೆ ಅವರಿಗೆ ಕೋಪ ಬರುತ್ತದೆ. ಉಳಿದ ಕಾಲಗಳಲ್ಲಿ ಅವುಗಳ ವಿಷಯದಲ್ಲಿ ಅವರೇಕೆ ಸ್ವಲ್ಪ ದಯೆ ತೋರ

ಬಾರದು? ನಮ್ಮ ಹೆಸರುವಾಸಿಯ ಮುಂದಾಳುಗಳು ಸಭೆಗಳಲ್ಲಿ ಭಾಷಣ ಮಾಡುವುದರ ಜೊತೆಗೆ ಆಗಾಗ—ವರ್ಷಕ್ಕೆ ೫-೬ ಸಲ ವಾದರೂ—ಪತ್ರಿಕೆಗಳಲ್ಲಿ ಒಂದೆರಡು ಲೇಖನಗಳನ್ನು ಬರೆಯುತ್ತಿದ್ದರೆ ಅವರ ಬಲವೂ ಹೆಚ್ಚುವುದು, ಪತ್ರಿಕೆಗಳ ಬಲವೂ ಹೆಚ್ಚುವುದು. ಪಾಶ್ಚಾತ್ಯ ದೇಶಗಳಲ್ಲಿ ಪ್ರಜಾಪ್ರಮುಖರು ಪತ್ರಿಕೆಗಳನ್ನು ಉಪಯೋಗ ಪಡಿಸಿಕೊಳ್ಳುವ ರೀತಿಯಲ್ಲಿ ನಮ್ಮವರೂ ಮಾಡಬೇಕು. ಹಾಗಾದರೆ ಪತ್ರಿಕೆಗಳ ಬೆಲೆ ಪ್ರಶಸ್ತಿಗಳು ಏರುವುವು.

## ಪ್ರಕಟನೆಯ ಭಯ

ಪತ್ರಿಕೆಗಳು ಪ್ರಜೆಗಳಿಗೋಸ್ಕರ ಏನು ಮಾಡಬಲ್ಲವು—ಎಂಬುದೊಂದೇ ತಕ್ಕ ಪ್ರಶ್ನೆಯಲ್ಲ. ಅವು ಏನು ತಡೆಯಬಲ್ಲವು—ಎಂಬುದೂ ಕೇಳಬೇಕಾದ ಪ್ರಶ್ನೆ. ಅವು ಇರುವವೆಂಬ ಕಾರಣದಿಂದಲೇ ಎಷ್ಟೋ ಅಕ್ರಮಗಳೂ ಅನ್ಯಾಯಗಳೂ ತಪ್ಪುತ್ತವೆ. ಪೊಲೀಸ್ ಅಧಿಕಾರಿಯು ಎದುರಿಗೆ ನಿಂತಿರುವ ಮಾತ್ರದಿಂದಲೇ ಎಷ್ಟೋ ಅಪರಾಧಗಳಿಗೆ ಅಡ್ಡಿಯಾಗುತ್ತದೆಯಲ್ಲವೆ? ಲೋಕಾಪವಾದ ಭೀತಿಯಿಂದಲೇ ಎಷ್ಟೋ ಜನರು ಪಾಪಕೃತ್ಯದಿಂದ ಬಹುಮಟ್ಟಿಗೆ ಹಿಮ್ಮೆಟ್ಟುತ್ತಾರಲ್ಲವೆ? ಅದೇ ರೀತಿಯಲ್ಲಿ ಪ್ರಕಟನ ಭಯವೊಂದೇ ಎಷ್ಟೋ ಮಂದಿ ಅಧಿಕಾರಿಗಳನ್ನೂ ಪ್ರಬಲ ಜನರನ್ನೂ ನೀಚ ಮಾರ್ಗದಿಂದ ದೂರವಾಗಿಡಬಲ್ಲುದು.

## ಪ್ರಜಾ ಧರ್ಮದ ಒಂದಂಶ

ಸರಕಾರದ ಲೋಪ ದೋಷಗಳನ್ನೂ, ಸಾರ್ವಜನಿಕ ಕಷ್ಟ ಹಿಂಸೆಗಳನ್ನೂ, ಸಮಾಜದ ಕ್ಷೇಮ ಲಾಭಗಳ ವಿಚಾರಗಳನ್ನೂ ತನಗೆ ತೋರುವಮಟ್ಟಿಗೂ ಪ್ರಮಾಣವಾಗಿಯೂ, ಸಕಾರಣವಾಗಿಯೂ ಬರೆದು ಪತ್ರಿಕೆಗಳಲ್ಲಿ ಪ್ರಕಟಗೊಳಿಸುವುದು ತನ್ನ ಕರ್ತವ್ಯವೆಂದು ಪ್ರತಿಯೊಬ್ಬ ಪ್ರಜೆಯೂ ಭಾವಿಸುವಂತಾಗಬೇಕು. ಇದು ಪ್ರಜಾ ಧರ್ಮದ ಒಂದು ಮುಖ್ಯ ಭಾಗ. ಈ ಧರ್ಮವು ಈಗ ನಮ್ಮ ದೇಶದಲ್ಲಿ ತಕ್ಕಷ್ಟು ಮಾತ್ರ ಆಚರಣೆಯಲ್ಲಿಲ್ಲ. ಉನ್ನತ ಪದವಿಗಳಲ್ಲಿರುವವರೂ, ವಿದ್ಯಾವಂತರಾದವರೂ, ಪ್ರಸಿದ್ಧಿಗೆ ಬಂದವರೂ ಸಹ ಈ ಧರ್ಮವನ್ನು ಮರೆತಿರುತ್ತಾರೆ.

ಪ್ರಜಾ ಧರ್ಮವು ಈ ಭಾಗದಲ್ಲಿ ಚೆನ್ನಾಗಿ ನಡೆಯುವವರೆಗೂ ಪತ್ರಿಕೆ
ಗಳ ಕಾರ್ಯವು ಸಾಂಗವಾಗಿ ಸಾಗಲಾರದು. ಪ್ರತಿಯೊಬ್ಬ ದೇಶೀ
ಯನೂ ಪತ್ರಿಕೆಯು ತನ್ನದೆಂದೂ, ಅದರ ಯೋಗಕ್ಷೇಮಗಳು ತನ್ನ
ಯೋಗಕ್ಷೇಮಗಳಿಗೆ ಸೇರಿದವೆಂದೂ, ಅದಕ್ಕೆ ತಾನು ಸಲ್ಲಿಸಬೇಕಾದ
ಸೇವೆಯೊಂದುಂಟೆಂದೂ ಮನಸಾ ಭಾವಿಸಿ, ಅದಕ್ಕೆ ಚಂದಾ ಕೊಡುವ
ವಿಷಯದಲ್ಲಿಯೂ, ಅದಕ್ಕೆ ಲೇಖನಗಳನ್ನು ಕಳುಹಿಸುವುದರಲ್ಲಿಯೂ
ನಿಜವಾದ ಶ್ರದ್ಧಾಸಕ್ತಿಗಳನ್ನು ತೋರುವವರೆಗೂ ಪತ್ರಿಕೆಗಳೂ
ಸಮರ್ಪಕವಾಗಿ ನಡೆಯಲಾರವು, ದೇಶಕಾರ್ಯಗಳೂ ಸಮರ್ಪಕವಾಗಿ
ನಡೆಯಲಾರವು. ಈ ತತ್ತ್ವವು ನಮ್ಮ ಸ್ವರಾಜ್ಯ ಸಮಾರಂಭದ
ತಳಹದಿಗೆ ಅಡಿಗಲ್ಲಿನಂತೆ ಇದೆ ಎಂಬುದನ್ನು ಸರ್ವ ಪ್ರಯತ್ನದಿಂದಲೂ
ನಾವು ಸಾರಬೇಕು.

## ವಿಜ್ಞಾನ ವಿಷಯಗಳು, ಸಮಾಜ ಸಮಸ್ಯೆಗಳು

ನಮ್ಮ ಪತ್ರಿಕೆಗಳಲ್ಲಿ ವಿಷಯ ವೈವಿಧ್ಯವಿಲ್ಲ; ಸಾಮಾನ್ಯವಾಗಿ
ರಾಜಕೀಯ ಪ್ರಸಂಗಗಳೇ ತುಂಬಿರುತ್ತವೆ. ಸಾಹಿತ್ಯ ಇತಿಹಾಸಗಳ
ಸಮಾಚಾರಗಳು ಎಲ್ಲೋ ಒಂದೊಂದು ವೇಳೆ ಬರುವುದುಂಟು.
ವಿಜ್ಞಾನಶಾಸ್ತ್ರ ಅರ್ಥಶಾಸ್ತ್ರಗಳ ವಿಚಾರಗಳೂ, ಪಾಶ್ಚಾತ್ಯ ನಾಗರಿ
ಕತೆಯ ಒಳ್ಳೆಯ ಗುಣ ಒಳ್ಳೆಯ ಲಕ್ಷಣಗಳನ್ನು ಕುರಿತ ವಿಚಾರಗಳೂ
ನಮ್ಮ ಪತ್ರಿಕೆಗಳಲ್ಲಿ ಹೆಚ್ಚುಹೆಚ್ಚಾಗಿ ಬರಬೇಕು. ನಮ್ಮ ಪತ್ರಿಕೆಗಳಲ್ಲಿ
ಸಾಮಾಜಿಕ ಪ್ರಶ್ನೆಗಳ ಪ್ರಸ್ತಾವವೇ ಇರುವುದಿಲ್ಲ. ಇದು ನನ್ನ ಮನ
ಸ್ಸಿಗೊಪ್ಪದು. ನಮ್ಮ ಸಾಮಾಜಿಕ ಸ್ಥಿತಿಯು ನಮ್ಮ ರಾಜಕೀಯ
ಸ್ಥಿತಿಗಿಂತ ಉತ್ತಮವೇನೂ ಆಗಿಲ್ಲ. ನಮ್ಮ ಮತಾಚಾರಗಳೂ ಧರ್ಮ
ಸಂಸ್ಥೆಗಳೂ ಹೊಂಡದ ನೀರಿನಂತೆ ಬಹು ಕಾಲದಿಂದ ಇದ್ದಲ್ಲಿಯೇ
ಇದ್ದು ನಾತ ಬಡಿಯುತ್ತಿವೆ. ಅನೇಕ ಸಂಪ್ರದಾಯಗಳು ಕಾಲ
ವಿರುದ್ಧವಾಗುತ್ತ ಬಂದಿವೆ. ಇವುಗಳನ್ನೆಲ್ಲ ಒಂದೇ ಏಟಿನಿಂದ ಹೊಡೆದು
ಕೆಡಹಬೇಕೆಂದು ಯಾರೂ ಹೇಳುವುದಿಲ್ಲ. ಆದರೆ ಅವುಗಳನ್ನು ಕುರಿತು
ಏಕೆ ವಿಚಾರ ನಡೆಸಬಾರದು? ಪ್ರಜಾ ಜನರ ಗಮನವನ್ನು ಅವರ ಆಚಾರ

ಪದ್ಧತಿಗಳ ಕಡೆಗೆ ತಿರುಗಿಸಿ, ಸದಭಿಪ್ರಾಯವು ಹುಟ್ಟುವಂತೆ ಮಾಡಿ, ಸತ್ಪರಿಷ್ಕಾರಗಳಿಗೆ ದಾರಿ ಮಾಡುವುದು ಪತ್ರಿಕೆಗಳ ಕರ್ತವ್ಯವಲ್ಲವೆ? ಈ ಭಾಗದಲ್ಲಿಯೂ ಇಂಗ್ಲಿಷ್ ಪತ್ರಿಕೆಗಳು ನಮಗೆ ಮಾರ್ಗದರ್ಶಕಗಳಾಗಿವೆ. ಈಚೆಗೆ ಇಂಗ್ಲಿಷ್ ಜನರ "ಪ್ರೇಯರ್ ಬುಕ್" ಅಥವಾ "ಪ್ರಾರ್ಥನಾ ಕ್ರಮ ಪುಸ್ತಕ"ದ ವಿಷಯವಾಗಿ ನಡೆಯುತ್ತಿರುವ ಮಹಾವಿಮರ್ಶೆಯನ್ನು ಕುರಿತು ಜನಾಭಿಪ್ರಾಯವನ್ನು ವಿಶದಗೊಳಿಸಬೇಕೆಂದು, "ಟೈಮ್ಸ್" ಮೊದಲಾದ ಪತ್ರಿಕೆಗಳು ನಾನಾ ವರ್ಗಗಳ ಪ್ರಸಿದ್ಧ ಪುರುಷರಿಂದ ಲೇಖನಗಳನ್ನು ತರಿಸಿ ಪ್ರಕಟಿಸುತ್ತಿವೆ. ನಮ್ಮ ಪತ್ರಿಕೆಗಳು ಹಾಗೆ ಮಾಡಲಾಗುವುದಿಲ್ಲವೆ? ನಮ್ಮ ಪತ್ರಿಕೆಗಳು "ಒಂದೇ ರಾಗ, ಒಂದೇ ತಾಳ" ಎಂಬ ವ್ರತವನ್ನು ಸ್ವಲ್ಪ ಒತ್ತಟ್ಟಿಗಿಟ್ಟು, ರಾಜಕೀಯ ಪ್ರಸಂಗಗಳಿಂದ ಬೇರೆಯಾದ ವಿಷಯಗಳಿಗೂ ಆಗಾಗ ಲಕ್ಷ್ಯ ಕೊಡುತ್ತಿದ್ದರೆ ಪತ್ರಿಕೆಗಳು ಮತ್ತಷ್ಟು ಆಕರ್ಷಕವಾಗುವುದರಲ್ಲಿ ಸಂದೇಹವಿಲ್ಲ. ಇಷ್ಟಕ್ಕೂ ರಾಜ್ಯ ಪ್ರಸಂಗವೆಲ್ಲ ಮಾನವ ಜೀವನದ ಒಂದಂಶ ತಾನೆ? ಅದೇ ಜೀವನ ಸರ್ವಸ್ವವೇನೂ ಅಲ್ಲ. ಪತ್ರಿಕೆಗಳ ಗಮನವಾದರೋ ಜೀವನ ಮಂಡಲದ ಎಲ್ಲ ಕಡೆಗಳಿಗೂ ಹರಡಿರಬೇಕು.

## ಪಾರಿಭಾಷಿಕ ಶಬ್ದಗಳು

ಕನ್ನಡ ಪತ್ರಿಕೆಗಳ ಶಬ್ದಶೈಲಿಗಳನ್ನು ಕುರಿತು ಒಂದೆರಡು ಮಾತುಗಳನ್ನಾಡಬೇಕಾಗಿದೆ. ನಮ್ಮ ಭಾಷೆಯು ಈಗಿನ ಸ್ಥಿತಿಯಲ್ಲಿ ಪತ್ರಿಕೆಗಳವರಿಂದ ಒಂದು ವಿಶೇಷ ಉಪಕಾರವನ್ನು ಅಪೇಕ್ಷಿಸತಕ್ಕುದಾಗಿದೆ. ಇದು ಹೊಸ ಭಾವನೆಗಳೂ ಹೊಸ ಅಭಿಪ್ರಾಯಗಳೂ ನಮ್ಮ ದೇಶದಲ್ಲಿ ಹರಡತಕ್ಕ ಕಾಲ. ಈ ಹೊಸ ಅಭಿಪ್ರಾಯ ಭಾವನೆಗಳಿಗೆ ತಕ್ಕ ಪದಗಳು ನಮ್ಮ ಹಿಂದಿನ ಭಾಷಾ ಕೋಶದಲ್ಲಿ ದುರ್ಲಭವಾಗಿವೆ. ಆದಕಾರಣ ನೂತನ ಪದ ರಚನೆ ಮಾಡಬೇಕಾಗುತ್ತದೆ. ಹೀಗೆ ಯಾವ ಒಂದು ಹೊಸ ಪದವನ್ನು ಪತ್ರಿಕೆಗಳವರು ತಯಾರು ಮಾಡಿ ಪ್ರಯೋಗಿಸುವರೋ ಅದು ಕಾಲಕ್ರಮದಲ್ಲಿ ಭಾಷೆಯ ಶರೀರಕ್ಕೆ ಸೇರಿಹೋಗುವುದು. ಭಾಷೆ ಬೆಳೆಯುವುದು ಹೀಗೆಯೇ. ಆದಕಾರಣ ನಮ್ಮ ಪತ್ರಿಕೆ

ಗಳೆಲ್ಲವೂ ಹೊಸ ಹೊಸ ರಾಜಕೀಯ ಭಾವಗಳನ್ನೂ ಸಾಮಾಜಿಕ ತತ್ತ್ವಗಳನ್ನೂ ವಿಜ್ಞಾನಶಾಸ್ತ್ರ ವಿಷಯಗಳನ್ನೂ ತಿಳಿಸುವುದಕ್ಕೆ ಗೊತ್ತಾದ ಪಾರಿಭಾಷಿಕ ಶಬ್ದಗಳನ್ನು ಏಕಪ್ರಕಾರವಾಗಿ ಉಪಯೋಗಿಸುತ್ತ ಬಂದರೆ ಭಾಷಾಭಿವೃದ್ಧಿಯು ತೊಡಕಿಲ್ಲದೆ ನಡೆಯುವುದು. ಈಗ ಈ ಪಾರಿಭಾಷಿಕ ಪದಗಳನ್ನು ಆರಿಸಿಕೊಳ್ಳುವುದರಲ್ಲಿ ನಾವು ಏಕರೂಪತೆಯ ಕಡೆಗೆ ಲಕ್ಷ್ಯಕೊಡುತ್ತಿಲ್ಲವೆಂದು ನನಗೆ ತೋರುತ್ತದೆ. ಒಂದೇ ಇಂಗ್ಲಿಷ್ ಪದಕ್ಕೆ ಒಂದೊಂದು ಪತ್ರಿಕೆಯವರು ಒಂದೊಂದು ಪ್ರತಿಪದವನ್ನು ಇಟ್ಟುಕೊಂಡಿದಾರೆ. "ಲೆಜಿಸ್ಲೆಟಿವ್ ಕೌನ್ಸಿಲ್" ಎಂಬುದನ್ನು ಕೆಲವರು ಹಾಗೆಯೇ ಕರೆಯುತ್ತಾರೆ; ಕೆಲವರು ಶಾಸನ ಸಭೆ ಎನ್ನುತ್ತಾರೆ; ಇನ್ನು ಕೆಲವರು ನಿಯಮ ನಿರ್ಮಾಣ ಸಭೆ ಎನ್ನುತ್ತಾರೆ; ಮತ್ತೆ ಕೆಲವರು ನ್ಯಾಯವಿಧಾಯಕ ಸಭೆ ಎನ್ನುತ್ತಾರೆ. "ಬ್ಯೂರಾಕ್ರಸಿ" ಎಂಬ ಪದವನ್ನು ಕೆಲವರು ಆಳರಸರು ಎಂದೂ, ಕೆಲವರು ದಬ್ಬಾಳಿಕೆ ಎಂದೂ, ಕೆಲವರು ನೌಕರಷಾಹಿ ಎಂದೂ, ಇನ್ನು ಕೆಲವರು ಅಧಿಕಾರಿ ವರ್ಗ ಎಂದೂ, ಮತ್ತೆ ಕೆಲವರು ವೇತನಿಕ ಪ್ರಭುತ್ವ ಎಂದೂ ಭಾಷಾಂತರ ಮಾಡುತ್ತಾರೆ. ಉದ್ದಾಮ ಪ್ರಬಂಧ ಲೇಖಕರ ಉಪಯೋಗಕ್ಕೆ ಇಂಥಾ ರೂಪ ಬಾಹುಳ್ಯವು ಅನುಕೂಲವೆಂದು ಕಂಡರೂ, ವಾಚಕ ದೃಷ್ಟಿಯಿಂದ ಅದು ಅನುಕೂಲವೆಂದು ಹೇಳಲಾಗುವುದಿಲ್ಲ. ಒಂದು ಹೊಸ ಅಭಿಪ್ರಾಯವನ್ನು ತಿಳಿಸುವುದಕ್ಕೆ ಎಲ್ಲರಿಂದಲೂ ಅಂಗೀಕೃತವಾದ ಒಂದು ಪದವು ಗೊತ್ತಾದುದಿರಬೇಕು. ಪ್ರಬಂಧ ಸೌಂದರ್ಯಕ್ಕೋಸ್ಕರ ಬೇಕಾದರೆ ಲೇಖಕರು ಅದರ ಜೊತೆಗೆ ಅಲ್ಲಲ್ಲಿ ಪರ್ಯಾಯ ಪದಗಳನ್ನು ಬೇರೆ ಬೇರೆ ಉಪಯೋಗಿಸಿಕೊಳ್ಳಬಹುದು. ಆದರೆ ಮುಖ್ಯ ಪದವು ಒಂದೇ ಎಲ್ಲ ಕಡೆಯೂ ರೂಢಿಗೆ ಬರಬೇಕು. ನಮಗೆ ಈಗ ಪಾರಿಭಾಷಿಕ ಪದ ಕೋಶವೊಂದು ಅವಶ್ಯವಾಗಿ ಬೇಕಾಗಿದೆ. ಅದನ್ನು ಪಂಡಿತರು ಮಾತ್ರವಲ್ಲದೆ ಲೇಖನಿಯಿಂದ ಜೀವಿಸುವ ನಾವುಗಳೂ ಕೂಡ ಕಲೆತು ತಯಾರು ಮಾಡಬೇಕಾಗಿದೆ. ಬರೆಯುವವರ ಕಷ್ಟಗಳೂ ಅನುಕೂಲಗಳೂ ಪಾಠ ಮಾತ್ರ ಹೇಳುವವರಿಗೆ ಅಷ್ಟು ಚೆನ್ನಾಗಿ ಅನುಭವಕ್ಕೆ ಬಂದಿರಲಾರವು.

## ಶೈಲಿ— ಸಾಹಿತ್ಯ ದೃಷ್ಟಿ

ವೃತ್ತಪತ್ರಿಕೆಗಳ ಶೈಲಿಯು ಸುಲಭವಾಗಿ ಇರಬೇಕಾದುದು ಉಚಿತವೇ ಸರಿ. ಈ ಕಾಲದಲ್ಲಿ ಜನರಿಗೆ ವ್ಯವಧಾನ ಕಡಿಮೆ, ಹವ್ಯಾಸಗಳು ಹೆಚ್ಚು. ಪಕ್ಕದಲ್ಲಿ ನಿಘಂಟುಗಳನ್ನಿಟ್ಟುಕೊಂಡು ಅರ್ಥವನ್ನು ಹುಡು ಕಾಡುವಷ್ಟರ ತಾಳ್ಮೆಯೂ ಶ್ರದ್ಧೆಯೂ ವಿರಾಮವೂ ಸಾಮಾನ್ಯ ಜನಕ್ಕಿರುವುದಿಲ್ಲ. ವೃತ್ತಪತ್ರಿಕೆಗಳು ಅವರ ಆದರಣೆಯನ್ನು ಪಡೆಯ ಬೇಕಾದರೆ ಅವರಿಗೆ ಅರ್ಥವಾಗುವಂತೆ ಇರಬೇಕು. ಆದರೆ ಸಾಮಾನ್ಯ ಜನರ ವಾಡಿಕೆಯ ಮಾತಿನ ರೀತಿಯಲ್ಲಿಯೇ ಪತ್ರಿಕೆಗಳವರು ಬರೆ ಯುತ್ತ ಹೋದರೆ ವಾಚಕರ ಭಾಷಾ ಜ್ಞಾನವು ಅಭಿವೃದ್ಧಿಯಾಗುವುದು ಹೇಗೆ? ನಾವು ಆಡುವ ಮಾತಿನಲ್ಲಿ ಎಷ್ಟೋ ಅಪಪ್ರಯೋಗಗಳೂ, ಎಷ್ಟೋ ಅಸಾಧು ಶಬ್ದಗಳೂ ಇರುತ್ತವೆ. ಪತ್ರಿಕೆಗಳವರು ಬರೆಯು ವಾಗ ಸಾಧ್ಯವಾದ ಮಟ್ಟಿಗೂ ಭಾಷೆಯನ್ನು ಶೋಧನೆ ಮಾಡು ವುದು ಬಿಟ್ಟು, ಇರುವ ದೋಷಗಳನ್ನು ಪುನಃಪುನಃ ವ್ಯವಹಾರದಲ್ಲಿ ತರುತ್ತಿದ್ದರೆ ಭಾಷೆಗೆ ಅಪಕಾರವೇ ಆಗುವುದು. ಪತ್ರಿಕೆಗಳ ಭಾಷೆಯು ಮನಸ್ಸಿಗೆ ಆಕರ್ಷಕವಾಗಿಯೂ, ವಿಶದವಾಗಿಯೂ, ಶುದ್ಧವಾಗಿಯೂ ಇರಬೇಕು. ನೂತನ ಪದ ಸಂಯೋಜನೆ ಮಾಡುವುದರಲ್ಲಿ ಅದು ವಿಕಾರವಿಲ್ಲದೆ ಶ್ರಾವ್ಯವಾಗಿರುವಂತೆ ನೋಡಬೇಕು. ನಾವು ಮರಾಠಿ ಮುಂತಾದ ಭಾಷೆಗಳನ್ನನುಸರಿಸಿ ಉಪಯೋಗಿಸುವ ಕೆಲವು ಮಾತು ಗಳು ಅಷ್ಟೇನೂ ಲಕ್ಷಣವಾಗಿಲ್ಲ. ಪತ್ರಿಕೆಗಳು ಮೇಲ್ಗಡೆಯಿರುವ ಗ್ರಂಥ ಭಾಷೆಗೂ ಕೆಳಗಡೆಯಿರುವ ಸಾಮಾನ್ಯ ಭಾಷೆಗೂ ಮಧ್ಯಸ್ಥ ಗಾರನಂತೆ ಇದ್ದುಕೊಂಡು ಕೆಳಗಿನದನ್ನು ಮೇಲಿನ ಕಡೆಗೆ ಎತ್ತು ತ್ತಿರಬೇಕು. ಆದ್ದರಿಂದ ಸಾಹಿತ್ಯ ಸೇವೆಯ ಕಡೆಗೂ ಪತ್ರಿಕಾಲೇಖ ಕರು ಲಕ್ಷ್ಯಕೊಡುವುದು ಅವಶ್ಯವಾಗಿದೆ.

### (೪) ವ್ಯಾಪಾರ ಪ್ರಕಟನೆಗಳ ಭಾಗ

ಪತ್ರಿಕೆಗಳ ವ್ಯಾಪಾರ ಪ್ರಕಟನೆಗಳನ್ನು ಕುರಿತು ನಾನು ಈಗ ಏನನ್ನೂ ಹೆಚ್ಚು ಹೇಳಲಾರೆ. ಸದ್ಯಕ್ಕೆ ಈ ಅಂಶವನ್ನು ಕುರಿತು ಹೇಳ

ಬೇಕಾದುದು ಹೆಚ್ಚಾಗಿಲ್ಲ. ಈಗ ನಮ್ಮ ಪತ್ರಿಕೆಗಳಲ್ಲಿರುವ ಪ್ರಕಟನೆಗಳು ಭಾರಿಯವುಗಳೇನೂ ಅಲ್ಲ. ಪತ್ರಿಕೆಗಳ ವ್ಯಾಪನೆ ಹೆಚ್ಚಿದ ಹೊರತು ಪ್ರಕಟನೆಗಳು ಹೆಚ್ಚುವುದಿಲ್ಲ. ಭಾರಿ ಭಾರಿಯಾದ ಪ್ರಕಟನೆಗಳು ಹೆಚ್ಚಾಗಿ ಬಂದ ಹೊರತು ಪತ್ರಿಕೆಗಳಿಗೆ ಲಾಭವಿಲ್ಲ. ಲಾಭ ಬೆಳೆದ ಹೊರತು ವ್ಯಾಪನೆಯನ್ನು ಹೆಚ್ಚಿಸುವ ಸೌಕರ್ಯಗಳಿಲ್ಲ. ಹೀಗೆ ಪತ್ರಿಕೆಗಳು ಸುಳಿಯಲ್ಲಿ ಸಿಕ್ಕಿ ಒದ್ದಾಡುತ್ತಿವೆ. ಹೀಗಿದ್ದರೂ ಒಂದು ಸೂಚನೆಯನ್ನು ಮಾಡಬೇಕಾಗಿದೆ. ಅಶ್ಲೀಲವೂ ಅಸಹ್ಯಕರವೂ ಆದ ಚಿತ್ರಗಳೂ ವರ್ಣನೆಗಳೂ ಇರತಕ್ಕ ಪ್ರಕಟನೆಗಳನ್ನು ನಮ್ಮ ಪತ್ರಿಕೆಗಳು ಬಿಟ್ಟುಬಿಡಬೇಕು. ಈಗ ಕಾಣಿಸಿಕೊಳ್ಳುತ್ತಿರುವ ಕೆಲವು ಔಷಧ ಪ್ರಕಟನೆಗಳು ಸ್ತ್ರೀಬಾಲಕರ ಗಮನಕ್ಕೆ ಬರಲು ಯೋಗ್ಯವಾದವುಗಳಲ್ಲ. ಅದರಂತೆಯೇ ಕೆಲವು ಗೃಹಕೃತ್ಯದ ಜಾಹೀರಾತುಗಳೂ ಒರಟೊರಟಾದ ಭಾಷೆಯಲ್ಲಿ ಜುಗುಪ್ಸೆಯನ್ನು ಉಂಟುಮಾಡತಕ್ಕ ರೀತಿಯಲ್ಲಿ ಇರುತ್ತವೆ. ಇಂಥವುಗಳನ್ನು ವರ್ಜಿಸಿದರೆ ಸ್ವಲ್ಪ ದ್ರವ್ಯ ನಷ್ಟವಾಗಬಹುದು. ಆದರೆ ಎಷ್ಟೋ ಕಷ್ಟ ನಷ್ಟಗಳನ್ನು ಸಹಿಸಿ ದೇಶಭಾಷಾ ಸೇವೆಗಳನ್ನು ಮಾಡುತ್ತಿರುವವರಿಗೆ ಇದೊಂದು ದೊಡ್ಡ ನಷ್ಟವಾಗಿ ತೋರಲಾರದು.

## ಸರಕಾರೀ ಸಂಸ್ಥೆಗಳ ಉಪಕಾರಗಳು

ಸರಕಾರದವರು ಪತ್ರಿಕೆಗಳಿಗೆ ಕಲ್ಪಿಸಬಹುದಾದ ಸೌಲಭ್ಯಗಳನ್ನು ಕುರಿತು ಏನು ಹೇಳುವುದಕ್ಕೂ ನನಗೆ ಅವಕಾಶವಿಲ್ಲ. ಪೋಸ್ಟು ಇಲಾಖೆಯವರು ಪತ್ರಿಕಾ ಪ್ರಚಾರಕ್ಕೆ ಇರತಕ್ಕ ಪ್ರತಿಬಂಧಕಗಳೇನೆಂಬುದನ್ನು ವಿಚಾರಿಸಿ ಅವುಗಳನ್ನು ನಿವಾರಣೆ ಮಾಡಬೇಕು. ಅವರಿಗೆ ತಕ್ಕ ಸಲಹೆಗಳನ್ನು ಕೊಟ್ಟು ಅವರಿಂದ ಆ ಕೆಲಸವನ್ನು ಮಾಡಿಸುವುದು ಈ ಸಭೆಯ ಕರ್ತವ್ಯವಾಗಿರುತ್ತದೆ. ನಮ್ಮ ದೇಶದ ಹಳ್ಳಿಯ ಪ್ರಾಂತಗಳಲ್ಲಿ ಅಂಚೆಯ ಕಛೇರಿಗಳೂ ಅಂಚೆಯಾಳುಗಳ ಸಂಚಾರವೂ ಜೇಗ ಬೇಗ ಹೆಚ್ಚಬೇಕು.

ಪತ್ರಿಕಾಲೇಖಕರಿಗೆ ಪ್ರಯಾಣ ಸೌಕರ್ಯಗಳನ್ನು ಒದಗಿಸಲು ರೆಯಿಲ್ವೆಗಳವರು ಏನು ಮಾಡಬಹುದೆಂಬುದನ್ನೂ ನಾವು ಯೋಚಿಸಿ ಸೂಚಿಸಬೇಕು.

ಸರಕಾರದ "ರಿಪೋರ್ಟು" ಅಥವಾ ವರದಿಗಳನ್ನೂ, ಇತರ ಕಾಗದ ಪತ್ರಗಳನ್ನೂ,—ಸಾಧ್ಯವಾದರೆ ತರ್ಜುಮೆ ಮಾಡಿಸಿ,—ಸಕಾಲದಲ್ಲಿ ಪತ್ರಿಕಾ ಸಂಪಾದಕರಿಗೆ ಒದಗಿಸಲು ಇಂಡಿಯಾ ಸರಕಾರದವರೂ, ಪ್ರಾಂತಿಕ ಸರಕಾರಗಳವರೂ ಯಾವ ಏರ್ಪಾಟುಗಳನ್ನು ನಡೆಸಬಹುದೋ ಅದನ್ನೂ ನಾವು ಆಲೋಚಿಸಿ ಅರಿಕೆ ಮಾಡಿಕೊಳ್ಳಬೇಕಾಗಿದೆ.

ಅದೇ ರೀತಿ ಡಿಸ್ಟ್ರಿಕ್ಟು ಬೋರ್ಡುಗಳವರೂ ಮ್ಯುನಿಸಿಪಾಲಿಟಿಗಳವರೂ ತಮ್ಮ ತಮ್ಮ ಕೂಟಗಳ ಕಾರ್ಯಕಲಾಪಗಳ ವರದಿಗಳನ್ನೂ ಆಡಳಿತಗಳ ವಾರ್ಷಿಕ ವರದಿಗಳನ್ನೂ ಸಹ ಪತ್ರಿಕೆಗಳಿಗೆ ತಲಪಿಸಲು ತಕ್ಕ ಏರ್ಪಾಟನ್ನು ಕೈಕೊಳ್ಳಬೇಕೆಂದು ನಾವು ಸೂಚಿಸಬಹುದಾಗಿದೆ.

ಪತ್ರಿಕೆಗಳ ರಾಜಕೀಯ ಸ್ವಾತಂತ್ರ್ಯವನ್ನು ಕುರಿತು ಒಂದು ಮಾತನ್ನೂ ನಾನು ಹೇಳಿಲ್ಲ. ಅದೇ ಬೇರೆ ಒಂದು ಉಪನ್ಯಾಸಕ್ಕೆ ತಕ್ಕಷ್ಟು ದೊಡ್ಡ ವಿಷಯ. ಈಗ ಅದನ್ನೆತ್ತಿಕೊಳ್ಳಬೇಕಾದ ಅವಸರವೂ ಅಷ್ಟಾಗಿ ಕಾಣುವುದಿಲ್ಲ.

ಇಷ್ಟು ಹೇಳಿದರೂ ನಮ್ಮ ಪತ್ರಿಕೆಗಳ ಅಭಿವೃದ್ಧಿಯ ವಿಚಾರಗಳಿನ್ನೂ ಹೇಳಬೇಕಾದುವು ಎಷ್ಟೋ ಉಳಿದಿವೆ. ಮಾಸಪತ್ರಿಕೆಗಳ ಸ್ಥಿತಿಯನ್ನು ಕುರಿತು ಏನನ್ನೂ ಹೇಳಿಲ್ಲ. ವಾರಪತ್ರಿಕೆ, ದಿನಪತ್ರಿಕೆಗಳ ವಿಷಯ ರೀತಿಗಳು ಉತ್ತಮಪಟ್ಟಂತೆಲ್ಲ ಮಾಸಪುಸ್ತಕಗಳು ಸ್ವತಃ ಉತ್ತಮವಾಗುವುವು.

## ಪತ್ರಿಕೋದ್ಯೋಗದ ಮೋಹ

ಪತ್ರಿಕೆಗಳನ್ನು ಹೊರಡಿಸಬೇಕೆಂಬ ಆಶೆ ತರುಣರಿಗೆ ಹೆಚ್ಚಾಗಿರುವುದುಂಟು. ನ್ಯಾಯದ ತುತೂರಿಯನ್ನು ಘೋರ್ಗರೆಯೋಣ, ಸ್ವಾತಂತ್ರ್ಯದ ಭೇರಿಯನ್ನು ಬಾರಿಸೋಣ, ಲೋಕವನ್ನೆಲ್ಲ ಅದಿರಿಸಬಲ್ಲ ಅಧಿಕಾರಿಗಳನ್ನು ಖಂಡಿಸಿ ಧೂಳೀಪಟ ಮಾಡೋಣ, ಸಭಾಮುಖದಲ್ಲಿ ಕುಳಿತು ಭಾಷಕ ಗಜಗಳಿಗೆ ಲೇಖಣಿಯ ಅಂಕುಶವನ್ನು ತೋರಿಸುತ್ತಿರೋಣ, ಜಗದ್ವ್ಯಾಪಾರದ ಮಹಾಮರ್ಮಗಳನ್ನೆಲ್ಲ ಹಿಡಿಯುವ

ಪಾತಾಳ ಭೇದಿಯೆಂದೆನ್ನಿಸಿಕೊಳ್ಳೋಣ—ಇವೆಲ್ಲವೂ ತಾರುಣ್ಯಕ್ಕೆ ಮೋಹಕಗಳಾದ ಸಂದರ್ಭಗಳಲ್ಲವೆ? ಆದರೆ ಈ ಮೋಹವು ಮೇಲಿನ ಪೊರೆಯುದೆಂಬುದನ್ನೂ ಅದರೊಳಗಿರುವ ವಸ್ತುವು ಅಷ್ಟೇನೂ ಮೋಹಕವಲ್ಲವೆಂಬುದನ್ನೂ ತರುಣರು ಕಾಣಲಾರರು. ಪತ್ರಿಕಾ ಲೇಖಕನಾಗಲುದ್ದೇಶಿಸಿ ನನ್ನ ಅಭಿಪ್ರಾಯವನ್ನು ಕೇಳಬರುವ ಯುವಕನಿಗೆ "ಬೇಡ" ಎಂದು ಹೇಳುವುದೇ ಸಾಮಾನ್ಯವಾಗಿ ನನ್ನ ಪದ್ಧತಿ. ಪತ್ರಿಕೋದ್ಯೋಗವು ಘಾಸಿಯ ಕೆಲಸ. ಅದನ್ನು ಕೈಗೊಂಡು ಉತ್ತೀರ್ಣನಾಗಬೇಕೆನ್ನುವವನಿಗೆ ಬಾಹ್ಯ ಸಂಪತ್ತು ಅಂತಸ್ಸಂಪತ್ತುಗಳೆರಡೂ ಹೇರಳವಾಗಿರಬೇಕು,—ನಮ್ಮ ದೇಶದ ಪ್ರಕೃತ ಸ್ಥಿತಿಯಲ್ಲಿ ಅಪರಿಮಿತವಾಗಿಯೇ ಇರಬೇಕು. ಇದನ್ನು ಹದಿನೈದು ವರ್ಷ ಪಟ್ಟ ಬಹು ವಿಧದ ಕಷ್ಟಾನುಭವದಿಂದ ಕಂಡುಕೊಂಡಿದ್ದೇನೆ. ತಕ್ಕ ಸಂಪತ್ತಿಲ್ಲದವನು ಎಷ್ಟು ಉತ್ಸಾಹದಿಂದ ಲೋಕವನ್ನು ಸಂತೋಷಗೊಳಿಸುವೆನೆಂದು ಹೊರಡುವನೋ ಅದಕ್ಕಿಂತ ಹೆಚ್ಚಾದ ನಿರಾಶೆಯಿಂದ ಸ್ವಲ್ಪಕಾಲದೊಳಗಾಗಿಯೇ ಲೋಕವನ್ನು ಬೈಯುತ್ತಾ ಹಿಂದಿರುಗುವನು.

## ಅದಕ್ಕಾಗಬೇಕಾದ ಅನುಕೂಲತೆ

ಪತ್ರಿಕೋದ್ಯೋಗವು ಒಂದು ಕಡೆ ಕಸಬು, ವ್ಯಾಪಾರ; ಇನ್ನೊಂದು ಕಡೆ ಧರ್ಮದೀಕ್ಷೆ, ಬುದ್ಧಿ ಶ್ರಮ. ಈ ಎರಡು ಕಡೆಗಳಿಗೂ ಬೇಕಾದ ಉಪಪತ್ತಿಗಳೊಬ್ಬನಲ್ಲಿ ಸೇರಿರುವುದು ಅಪರೂಪ. ಪಾಶ್ಚಾತ್ಯ ದೇಶಗಳಲ್ಲಿ ಬಂಡವಾಳವನ್ನೊದಗಿಸುವ ಜನರು ಬೇರೆ, ಪತ್ರಿಕಾ ಸಂಪಾದಕರು ಬೇರೆ; ವ್ಯಾಪಾರದ ಆಡಳಿತ ಬೇರೆ, ಲೇಖಕರ ಏರ್ಪಾಟು ಬೇರೆ. ಹೀಗೆ ಭಾರವು ಭಾಗವಾಗಿ ನಾಲ್ವರ ತಲೆಯಮೇಲೆ ಹೊತ್ತಿರುವುದರಿಂದ ಪತ್ರಿಕೆಗಳು ಅಲ್ಲಿ ಉಚ್ಚಾಭ್ಯುದಯ ದಶೆಗೆ ಬರುವುದು ಸಾಧ್ಯವಾಗಿದೆ. ಜಾಯಿಂಟ್ ಸ್ಟಾಕ್ ಕಂಪೆನಿಗಳು ಅಲ್ಲಿ ಆ ನಾಲ್ಕು ಬಗೆಯ ಶಕ್ತಿ ಉಪಪತ್ತಿಗಳನ್ನು ಒಟ್ಟುಗೂಡಿಸುತ್ತವೆ. ನಮ್ಮಲ್ಲಿ ಜಾಯಿಂಟ್ ಸ್ಟಾಕ್ ಪ್ರಯತ್ನಕ್ಕೆ ಸಾವಿರ ವಿಘ್ನಗಳಿವೆ. ಜನರಲ್ಲಿ ಪರಸ್ಪರ ನಂಬಿಕೆಯೂ ಐಕಮತ್ಯವೂ ಬೆಳೆದು, ಬುದ್ಧಿವಂತರೂ ಹಣವಂತರೂ ಕಲೆತು ಕೆಲಸಮಾಡುವ ಅಭ್ಯಾಸವನ್ನು ಕಲಿಯುವವರೆಗೂ

ನಮ್ಮ ದೇಶದಲ್ಲಿ ಪತ್ರಿಕಾಕಾರ್ಯಕ್ಕೆ ದೊಡ್ಡ ದೊಡ್ಡ ಕಂಪೆನಿಗಳು ಸಿದ್ಧವಾಗುವ ಭರವಸೆಯಿಲ್ಲ. ಸದ್ಯಃ ನಮ್ಮ ಪತ್ರಿಕೋದ್ಯೋಗಿಗಳೇ ಇಬ್ಬರು ಒಂದು ಕೋಣೆಯೊಳಗೆ ಇರಲಾರರು.

ಅಲ್ಪ ಬಂಡವಾಳದಿಂದ ದೊಡ್ಡ ಪತ್ರಿಕೆಯನ್ನೆಬ್ಬಿಸುವೆವೆಂಬುದು ಭ್ರಾಂತಿಯ ಮಾತು. ಈ ಕಾಲದಲ್ಲಿ ಅಂಥಾ ಅದ್ಭುತಗಳು ಅಪರೂಪ. ಇತರ ವ್ಯಾಪಾರಗಳಲ್ಲಿ ಹೇಗೋ ಪತ್ರಿಕಾ ವ್ಯಾಪಾರದಲ್ಲಿಯೂ ಹಾಗೆಯೇ ಹೆಚ್ಚು ಬಂಡವಾಳದವರೇ ಎಲ್ಲ ಕಷ್ಟ ನಷ್ಟಗಳಿಂದಲೂ ಪಾರಾಗಿ, ಪೋಟಾಪೋಟಿಯನ್ನು ಮುರಿದು, ಲಾಭಪಡೆಯತಕ್ಕವರು. ಈಗ ಕರ್ನಾಟಕದಲ್ಲಿ ಒಳ್ಳೆಯ ಪತ್ರಿಕೆಗಳಿಗೆ ಅವಕಾಶವಿಲ್ಲದೆ ಇಲ್ಲ. ಅನೇಕ ಭಾಗಗಳಲ್ಲಿ ಇನ್ನೂ ಯಾವ ಪತ್ರಿಕೆಯ ವ್ಯಾಪನೆಯೂ ಆಗಿಲ್ಲ. ನಮ್ಮಲ್ಲಿ ವ್ಯಾಪಾರಾನುಕೂಲವುಳ್ಳ ದೊಡ್ಡ ಊರುಗಳ ಸಂಖ್ಯೆಯು ಇನ್ನೂ ತೀರಾ ಹೀನವಾಗಿಲ್ಲ. ಅವು ಬೆಳೆದು ವ್ಯಾಪಾರವು ಹೆಚ್ಚುವುದಕ್ಕೂ ಕೂಡ ಆ ಪ್ರದೇಶಗಳಲ್ಲಿ ಪತ್ರಿಕಾ ಸಂಚಾರವು ಅತ್ಯಾವಶ್ಯಕ. ಮೂರು ನಾಲ್ಕು ಲಕ್ಷ ರೂಪಾಯಿಗಳ ಮೂಲಧನವುಳ್ಳ ಒಂದು ಕಂಪೆನಿ ಏರ್ಪಾಟಾಗಿ ಅದರಿಂದ ಒಂದು ದಿನ ಪತ್ರಿಕೆ ಹೊರಟರೆ ನಾಲ್ಕೈದು ವರ್ಷಗಳಲ್ಲಿ ಅದು ಸ್ಥಿರಪಟ್ಟೀತು. ಅದು ಬೇಕಾದರೆ ವಾರಕ್ಕೆ ಮೂರಾವರ್ತಿಯೋ ಎರಡಾವರ್ತಿಯೋ ಹೊರಡುವ ಪತ್ರಿಕೆಯಾಗಿಯಾದರೂ ಪ್ರಾರಂಭಿಸಬಹುದು. ಈಗ ನಮ್ಮಲ್ಲಿ ವಾರಪತ್ರಿಕೆಗಳ ಸಂಖ್ಯೆಯೇನೂ ಕಡಿಮೆಯಾಗಿಲ್ಲ. ಆದರೆ ಅವುಗಳ ಸಂಚಾರ ಮಾತ್ರ ವಿಸ್ತಾರವಾಗಿಲ್ಲ. ಎರಡು ಮೂರು ಸಣ್ಣ ಸಣ್ಣ ಪತ್ರಿಕೆಗಳನ್ನು ಪ್ರಕಟಿಸುವುದಕ್ಕೆ ಪ್ರತಿಯಾಗಿ, ಅವುಗಳಿಗೆಲ್ಲ ತಗಲುವ ವ್ಯಯವನ್ನು ಒಟ್ಟು ಸೇರಿಸಿ ಒಂದು ಒಳ್ಳೆಯ ಪತ್ರಿಕೆಯನ್ನು ಮಾಡಿದರೆ, ಅದು ಅವುಗಳೆಲ್ಲಕ್ಕಿಂತ ಯಶಸ್ವಿಯಾಗಿ ನಡೆದೀತು. ೨೦-೨೪ ಪುಟಗಳುಳ್ಳದಾಗಿ, ಚಿತ್ರಾಲಂಕೃತವಾಗಿ, ಕಥಾ ಪ್ರಬಂಧಾದಿ ಮನೋರಂಜಕ ವಿಷಯಗಳನ್ನೊಳಗೊಂಡುದಾಗಿರುವ ಒಳ್ಳೆಯ ವಾರಪತ್ರಿಕೆಯಾದರೆ ಅದಕ್ಕೆ ಮನೆ ಮನೆಯಲ್ಲಿಯೂ ಮನ್ನಣೆ ದೊರೆತೀತೆಂದು ನನಗೆ ನಿರೀಕ್ಷೆಯಿದೆ. ಆದರೆ ಅದಕ್ಕೆ ಮೊದಮೊದಲು

